3 ಶ್ರೀ ಜಯಾಭ್ಯುದಯ ನೃಪ ಶಾಲವಾಹನ ಶಕ ವರುಷ ೧೪೫೫ನೆಯ ಪರಿವ
4 ರ್ತ ಮಾನಕ್ಕೆ ಸಲ್ಲುವ ಜಯ ಸಂವತ್ಸರದ ಚೈತ್ರ ಶು ೧೫ ಚಂದ್ರವಾರ ಚಂದ್ರೋಪರಾ
5 ಗ ಪುಣ್ಯಕಾಲದಲ್ಲು ಶ್ರೀಮದನೇಕ ಸಿಂಹಾಸನಾಧಿಪತ್ಯ ಅನೆಗೊಂದಿ ರಾಜಾಧಿರಾ
6 ಜ ಪರಮೇಶ್ವರ ಅನೆಗೊಂದಿ ಅಚ್ಯುತರಾಯರು ಮಹಾರಾಯರ ಸಾಂಪ್ರದಾ
7 ಯಕರಾದ ಗುತ್ತಲದ ಚಿಕ್ಕಪ್ಪಣ ರಾಯರು ಮೌನ ಭಾರ್ಗವ ಗೋತ್ರೋತ್ಪನ್ನರಾದ ಶುಕ್ಲಯಜು
8 ಶಾಖೆಯ ಕಾತ್ಯಾಯನ ಸೂತ್ರದ ಭಾರ್ಗವ ಚ್ಯವನ ಅಪ್ನುವಾನಔರುವ ಜಾಮದಗ್ನಿ
9 ಪಂಚಾರುಷೇಯ ಪ್ರವರಾನ್ವಿತ ಜಾಮದಗ್ನಿ ಗೋತ್ರದ ಬೋಧಾಯನ ಸೂತ್ರದ ಯಜುಃ ಶಾಖೆ
10 ಯ ಅನೆ ಗೊಂದಿ ಸ್ಥಳದ ವೆಂಕಟಾದ್ರಿ ಯಜಮಾನರ ಪ್ರಪೌತ್ರರಾದ ಶಂಕರಪ್ಪನ
11 ಪೌತ್ರರಾದ ಅಂಣಪ್ಪನ ಪುತ್ರರಾದ ವೆಂಕಟಾದ್ರಿಯ ಜಮಾನರಿಗೆ ಹುರಳಿ
12 ಪಾರೆದ ದೇಶಪಾಂಡೆತನವನ್ನು ಕೊಟ್ಟವಾಗಿ ಈ ದೇಶಪಾಂಡ್ಯತನಕ್ಕೆ ಇದ್ದಸ್ವಾ
13 ಸ್ಥಿಗಳು ಭೂಮಿ ಮನೆಗಳು ಗ್ರಾಮಾನು ಗ್ರಾಮಕ್ಕೆ ಇದ್ದ ಉಂಬಳಿ ಆಯವರ್ತನೆ
14 ಕೊಟ್ಟ ನೆಲ ಧಾನ್ಯ ಬೆಳಸು ಸರ್ವಧಾನ್ಯ ಫಲ ಮುಂತಾದ್ದನ್ನು ಧಾರೆಯರ ಕೊಟ್ಟು
15 ಅದೆ ಈ ಹುರಳಿ ಗ್ರಾ ೨ ಕ್ಕೆ ಸ್ವಾಸ್ಥಿ ಭೂಮಿಗಳು ಮನೆಗಳು ಆಯಹಾರಕಕಂಠವ
16 ಣವಳೆ ಬುಟ್ಟಿ ಮೊರಸಹಿತಾ ಕೊಟ್ಟು ಏನು ಉಂಟಾದ್ದನ್ನು ಸಹಿರಣ್ಯೋ
17 ದಕದಾನಧಾರಾ ಪೂರ್ವಕವಾಗಿ ಶ್ರೀಮನ್ ಮಹಾಮಲ್ಲಾರ ಲಿಂಗದೇವರ ಸನ್ನಿಧಾ

(ಹಿಂಭಾಗ)

18 ನದಲ್ಲು ತುಂಗಭದ್ರಾ ತೀರದಲ್ಲು ಚಂದ್ರೋಪರಾಗ ಪುಣ್ಯ ಕಾಲದಲ್ಲು
19 ಸ್ತ್ರೀಪುತ್ರ ಸಹಿತ ಧಾರೆಯೆರದು ಕೊಟ್ಟು ಅದೆ ········ ನಿ
20 ಧಿ ನಿಕ್ಷೇಪ ಜಲ ಪಾಶಾಣ ಅಕ್ಷೀಣಿ ಆಗಾಮಿ ಛತ್ರ ಚಾಮರಾಂದೋಳಿ
21 ಕಾದಿ ಅಷ್ಟಭೋಗಂಗಳು ಹುರಳಿ ಆ ಕೂಟದ ಕರಣಿಕೆ ಈ ಹುರಳಿ ಪೀಠದ
22 ದೇಶಪಾಂಡ್ಯತನ ಸಹಿತವಾಗಿ ಹರಿಹರಾರ್ಪಿತವಾಗಿ ಕೊಟ್ಟು ಇದಕ್ಕೆ ನಮಗೆ ಅ
23 ರಸುಗಳಿಗೆ ಪಾಚ್ಛಾಯಿಗಳಿಗೆ ಈ ಪುಣ್ಯ ಲಧ್ಯವೆಂದು ನೋಡಿ ದಾನಪಾಲನೆ ಮಾ
24 ಡುತ್ತಾ ಇರಬೇಕು ಇದಕೆ ತಪ್ಪಿದರೆ ಕಾಶಿಯಲ್ಲಿ ಮಾತಾ ಪಿತೃ ಗುರುವಿಗೆ ತಪ್ಪಿದ ಹಾ
25 ಗೆ ಆದಿತ್ಯ ಚಂದ್ರಾವನಿಲೋನಲಶ್ಚದ್ಯೌ ರ್ಭೂಮಿ ರಾಪೋ ಹೃದಯಂ ಯಮಶ್ಚ ಅ
26 ಹಶ್ಚರಾತ್ರಿಶ್ಚ ಉಭೇಚಸಂಧ್ಯೇಧರ್ಮಶ್ಚ ಜಾನಾತಿನರಸ್ಯ ವೃತ್ತಿಂದಾನಾತ್ಸು ಪಾ
27 ಲತೋರಾಜಾನದಾನಾತ್ಪಾಲತೋ ಗುರುಃ ದಾನಾತ್ಸು ಪಾಲತಾಮಾತಾ ತತ್ಪಲಂಲಭತೇಮ
28 ಯಿಯೆಂದು ಬರಸಿ ಕೊಟ್ಟ ತಾಂಬ್ರ ಶಾಸನದ ಧರ್ಮ ಪಟ್ಟ ಈ ಸ್ಥಳದ
29 ದೇವತಾರಾಧನೆ ಇವರ ಮುಖದಲ್ಲಿ ನಡೆಯಬೇಕೆಂದು ಬರ ಕೊ
30 ಟ್ಟ ಧರ್ಮ ಶಾಸನ ಘಟ ೧೫ ಪಲೆ ೫ ತೂಕಗ ೪೦ ಪಂಚಾಶತು
31 ಅಂಗುಲ ॥ ಶ್ರೀ ಖಂಡೇ ರಾಯ

## 65

ಅದೇ ಕೆಳದಿ ಕೃಷ್ಣಜೋಯಿಸರ ವಶದಲ್ಲಿದ್ದ ತಾಮ್ರ ಶಾಸನ ಇನೆಯದು (೧ ಹಲಗೆ)

(ಮುಂಭಾಗ)

1 ಗಣಪತಿ ಶಾರದಾಗುರುಭ್ಯೋನಮಃ
2 ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇತ್ರೈರೋಕ್ಯ ನಗರಾ
3 ರಂಭ ಮೂಲಸ್ತಂಭಾಯ ಶಂಭವೇ । ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲವಾಹ
4 ನ ಶಕವರುಷ ೧೪೩೧ನೆಯ ವಿಭವ ಸಂವತ್ಸರದ ಕಾರ್ತಿಕ ಬ ೩೦ ರ ಸೂರ್ಯೋ
5 ಪರಾಗ ಪುಣ್ಯಕಾಲದಲ್ಲು ಎಡವ ಮುರಾರಿ ಕೋಟೆ ಕೋಲಾಹಲ ವಿಶುದ್ಧ ಸಿದ್ಧಾಂತ ಪ್ರತಿ
6 ಪಾಲಕ ನಮಃ ಶಿವಾಯ ಸದಾಶಿವ ಮುದ್ರಾಂಕಿತ ಶಿವಗೋತ್ರೋತ್ಪನ್ನರಾದ ದೇವಗೊಂಡರ
7 ಪ್ರಪೌತ್ರರಾದ ಗೋಪಗೊಂಡರ ಪೌತ್ರರಾದ ಬಸಗೌಂಡರ ಪುತ್ರರಾದ ಚವುಡಗೊಂ
8 ಡರು ಭದ್ರಗೊಂಡರ ಸುಪುತ್ರ ಸದಾಶಿವನಾಯಕರು ಭಾರ್ಗವ ಚ್ಯವನ ಅಪ್ನ
9 ವಾನ ಔರವ ಜಮದಗ್ನಿ ಗೋತ್ರದ ಬೋಧಾಯನ ಸೂತ್ರದ ಯಜುಃ ಶಾಖೆಯ ವಿ
10 ಜಯ ನಗರದ ವೆಂಕಟಾದ್ರಿ ದೈವಜ್ಞಯಜಮಾನರ ಪ್ರಪೌತ್ರರಾದ ಹೇಮಾದ್ರಿಯಜ
11 ಮಾನರ ಪೌತ್ರರಾದ ನರಸಿಂಹ ಯಜಮಾನರ ಪುತ್ರರಾದ್ಧನರಸಪ್ಪ ದೈವಜ್ಞಯಜ
12 ಮಾನರಿಗೆ ಕೆಳದಿ ಶ್ರೀ ಸದಾಶಿವನಾಯಕರು ನಾಗತರುಣಿನಗರದ ಗುತ್ತಿ
13 ವೇಂಡೆಯದ ಅರ್ರುದ ಕಂಪಣದ ಬನವಾಸೆ ಪನ್ನಿರ್ಚಾಸಿರಕ್ಕೆ ಸಲ್ಲುವ ಕ
14 ಳದಿ ೧೨ ಸಾಶಿರ ಭೂಮಿಗ ೨ ಇಕ್ಕೇರಿ ೬ ಸಾಭೂಗ ೨೪೦ಯಲಗಳ
15 ಲೆ ೩ ಸಾಸಿರ ಭೂಗ ೧೨ ಆತವಾಡಿ ಸಾ—ಭೂಗ ೧೨ ಕೆ ಕಲಶಿಗ ೬೦೦ ಗ ೮ ಮಂ
16 ಕಸಾರೆಸಾಭೂಗ ೧೨ ಬೇದೂರು ಗ್ರಾನಗರ ಭೂ ೩೬ ಬಿದರೂರಲಿ ಸಾ ಇ
17 ರಜ್ಯೋತಿಷ್ಯ ಭಾಗ ೬೬ ಕ್ಯಸನೂರ ಗ ೮ ಭೂಗ ೧೨ ಸೊರಬ ೬ ಸಾಶು
18 ಗ ೨೪ ಅಂಡಿಗೆ ಸಾ ೨ ಬಂದಲಿಕೆ ಪಟ್ಟಣ ಹಳ್ಳಿ ಸಹಶುಗ ೭೪

19 ಇಂತಿಷ್ಟು ಶೀವೆಗಳು ಭೂಮಿಗಳು ಮನೆಗಳು ಚಾತುರ್ವರ್ಣದಲ್ಲು ಲಗ್ನಗ
20 ಣಪತಿ ಪುಣ್ಯಾಹಕಲಶ ಮುಹೂರ್ತಕಾಣಿಕೆ ಉಡುಗೊರೆ ಇವ
21 ರೆ ಲಗ್ನ ಸಹ ಮಾಡಿಕೊಂಡು ಬರುವ ಹಾಗೆ ಶ್ರೀ ರಾಯರು ದತ್ತ ಮಾಡಿಕೊಟ್ಟರು ಇ
22 ದಲ್ಲದೆ ನಾರಪ್ಪ ಯಜಮಾನರಿಗೆ ದಿನವಹಿ ಭೂಮಿ ಗ ೧ ಕ್ಕೆ
23 ಗ ೧೬ ನಾವು ಗ ೬೨ ಕೊಟ್ಟದೆ ಅಲ್ಲದೆ ಕೆಳದಿ ಸ್ಥಳದ ಶೇನ
24 ಭಾವಿಕೆ ವರ್ತನಿ ಸಂಬಳ ಭೂಮಿಗಳ ಗೌಡಿಕೆ ಅಲ್ಲಿ

(ಹಿಂಭಾಗ)

25 ಸ್ಥಳದ ದೇವತಾಪೂಜೆ ಶಂಭುಲಿಂಗಪೂಜೆ ಗೌಡಿಕೆ ಭೂ
26 ಮಿತತ್ವ ದೈವಜ್ಞ ಯಜಮಾನಿಕೆ ಇಂತಿಷ್ಟು ಶ್ರೀ ವರದಾ ತೀರದ
27 ಶ್ರೀರಾಮೇಶ್ವರ ಸನ್ನಿಧಿಯಲ್ಲು ಸೂರ್ಯೋಪರಾಗ
28 ಪುಣ್ಯಕಾಲದಲ್ಲು ನಿಧಿ ನಿಕ್ಷೇಪ ಜಲಪಾಷಾಣ ಅಕ್ಷಿಣಿ ಆಗಾ
29 ಮಿ ಇಷ್ಟು ಕೊಟ್ಟವಾಗಿ ಮತ್ತು ಛತ್ರ ಚಾಮರ ಆಂದೋಳಿಕಾ
30 ದಿ ಅಷ್ಟ ಭೋಗಂಗಳಂ ಕೊಟ್ಟು ರಾಜರಿಗೆ ಪಾದುಷಾಗಳಿಗೆ ಅರ
31 ಸುಗಳಿಗೆ ನಮಗೆ ಸಹ ಪುಣ್ಯ ಲಭ್ಯವೃದ್ಧಿಯಾಗಿ ನಡೆಬೇ
32 ಕೆಂದು ಪುರಾಣೋಕ್ತದ ರೀತಿ ಮುಂದೆ ನಡಸುವರಿಗೆ ಬರಸೂಲು ಡಾಮರ
33 ಆಗಿದ್ದರೂ ಮಿಗತಾಗಿ ತ್ರಿವಾಚ್ಯವಾಗಿ ಸರ್ವ ವೃತ್ತಿಯ ನಡೆಸಬೇಕೆಂದು
34 ಶಿವಾರ್ಪಿತವೆಂದು ಕೊಟ್ಟವಾಗಿ ಕಾಶಿಕ್ಷೇತ್ರ ಮಾತಾಪಿತೃ
35 ಗುರುವಿಗೆ ತಪ್ಪಿ ನಡೆದ ಹಾಗೆ..........
36 ...................ದಾನ ಧರ್ಮ
37 ಪಟ್ಟಿ ಆದಿತ್ಯ ಚಂದ್ರ ಅನಿಲೋನಲಶ್ಚದ್ಯಾ ಭೂರ್ಮಿ ರಾಪೋ ಹೃ
38 ದಯಂ ಯಮಶ್ಚ ಅಹಶ್ಚರಾತ್ರಿಶ್ಚ ಉಭೇಚಸಂಧ್ಯೇ ಧರ್ಮಶ್ಚ
39 ಜಾನಾತಿ ನರಸ್ಯವೃತ್ತಿಂ ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾ
40 ಲನಂ ಪರದತ್ತಾ ಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ದಾನಾತ್ಸು
41 ಪಾಲತೋರಾಜಾನ ದಾನಾತ್ಪಾಲತೋ ಗುರುಃ ದಾನಾತ್ಸು ಪಾಲಿತಾ
42 ಮಾತಾ ತತ್ಫಲಂ ಲಭತೇಮಯಿ

## 66

ಆವಿನಹಳ್ಳಿ ಹೋಬಳಿ ಇಕ್ಕೇರಿ ಗ್ರಾಮದ ಈಶ್ವರ ದೇವಾಲಯದ ತಳಪಾದಿ ಕಲ್ಲಿನಲ್ಲಿ

1 ಯಿ ಮಂಟಪದ ಕೆಲಸವ ಗೆಯಿದವ ಆಚಾರಿ ಹೊಂಬುಚದ ವೆಂಕಟಯನು

## 67

ಆದೇ ಆವಿನಹಳ್ಳಿ ಹೋಬಳಿ ಹುಲಿಮನೆ ಗ್ರಾಮದ ಪಟೇಲ್ ಸುಬ್ಬಯ್ಯನವರ ಮನೆಯಲ್ಲಿ
ರುವ ಕಡತದಲ್ಲಿ ದೊರೆತ ತಾಮ್ರಶಾಸನದ ಪ್ರತಿ.

1 ನಿರ್ವಿಘ್ನಮಸ್ತು ಶುಭಮಸ್ತು ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ । ತ್ರೈಲೋಕ್ಯ ನಗರಾರಂಭ
2 ಮೂಲಸ್ತಂಭಾಯ ಶಂಭವೇ । ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಖ
3 ವರುಷಂಗಳು ಸಾವಿರದ ೧೭೩೦ನೆ ಪರಿವರ್ತಮಾನಕ್ಕೆ ಸಂದುಸಲುವ ವಿಭವನಾಮ ಸಂ
4 ವತ್ಸರದ ಆಶ್ವೀಜ ಶು ೧೩ ರವಿವಾರದಲ್ಲು ಶ್ರೀಮತು ಹುಲಿಮನೆ ಕಾಳಿ
5 ಸುಬ್ಬಣ್ಣನವರ ಮಗ ಶೇಷಯ್ಯನವರಿಗೆ ವೇದಮೂರ್ತಿಗಳಾದ ಯಿಕ್ಕೇರಿ ಶೇಷಾಚಾರ್ಯ
6 ರ ಮಗ ಭೀಮಾಚಾರ್ಯನು ಬರೆಸಿ ಕೊಟ್ಟಹೊಲೆಯಾಳು ಹೆಣ್ಣಾಳು ಕ್ರಯ ಚೀ
7 ಟ್ಟಿನಕ್ರಮವೆಂತೆಂದರೆ ನಾನು ನಂನ ಅವಸರ ನಿಮಿತ್ತವಾಗಿ ನಂನ ಹೊಲೆಯಾ
8 ಳು ಕಂನನ ಹೆಂಡತಿ ಚಉಡಿಯೆಂಬ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆ
9 ನಾಗಿ ಯಿ ಹೆಂಣು ಆಳಿಗೆ ಬುದ್ಧಿವಂತರು ಕಂಡು ಕಟ್ಟಿದ ಕ್ರಯಗ ೩ ಅ
10 ಕ್ಷಾರದಲು ಮೂರು ವರಹಂನ ತೆಗೆದುಕೊಂಡು ಯಿ ಹೆಂಣಾಳು ಹುಡು
11 ಗಿಯಂನ್ನು ನಿಮಗೆ ಕ್ರಯ ಮೂಲಕ್ಕೆ ಕೊಟ್ಟೆನಾಗಿ ಯಿ ಹೆಂಣಿಗೆ ಆದಿ ಅಡಮು
12 ಅಡ್ಡಿ ಸಡ್ಡಿಯೇನು ಉಂಟಾದಂನ್ನು ನಾನೇ ನೋಡಿಕೊಂಡೇನು ಯೆಂದು
13 ಬರಸಿಕೊಟ್ಟ ಕ್ರಯ ಚೀಟು ಹಣ ಸಂದ ನಿಶಿಧಿ ಯಾಗಿದೆ ಸಾಧನಯಿಂತ
14 ಪ್ಪುದಕ್ಕೆ ಸಾಕ್ಷಿಗಳು ಬೇದೂರಕ್ಷಿಸುಬ್ಬಯ್ಯ ಬಾಳೆಹಳ್ಳಿ ಪಂಡ್ರಿ ದೊಡ್ಡ
15 ಯ್ಯ—ಶ್ರೀಶ್ರೀ

## 68

ಆದೇ ಹೋಬಳಿ ದೇವಾಸ ಗ್ರಾಮದ ಸಮೀಪ ಹಳ್ಳದ ಬಳಿ ಬಿದ್ದಿರುವ ಕಲ್ಲು.

ಪ್ರಮಾಣ 3′–6″×2′–0′

ತ್ರೈಲೋಕ್ಯ ನಗರಾರಂಭ ಮೂಲ ಸ್ತಂ
1 ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ । ಶಿವಪಾದಾಬ್ಜ ಭೃಂಗನ ಲಿಖಿತ ॥
2 ಭಾಯ ಶಂಭವೇ ॥ ಪಂಚೆಯದ ಮಾಧವಯ್ಯ ಶ್ರೀ

3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಪ
4 ರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮತ್ರೈ
5 ಳೋಕ್ಯಮಲ್ಲ ದೇವರ ವಿಜಯ ರಾಜ್ಯ ಮುತ್ತರೋತ್ತರಾಭಿ ವೃದ್ಧಿ ಪ್ರವರ್ದ್ಧಮಾನ ಮಾಚ
6 ನ್ದ್ರಾರ್ಕ್ಕತಾರಂಬರಂ ಸಲುತ್ತು ಮಿರೆ ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮಹಾ ಸಬ
7 ದ ಮಹಾ ಸಾಮಂತಾಧಿಪತಿ ಮಹಾಪ್ರಚಣ್ಡ ದಣ್ಡನಾಯಕ ವೈರಿಭಯದಾಯಕ ಮ··
8 ಮಾಣಿಕ್ಯ ನೀತಿಚಾಣಿಕ್ಯಂ ಸತ್ಯರಾಧೇಯಂ ಶೌಚಾಂಜನೇಯಂ
9 ವಿಬುಧಜನವನಜವನ ಮಾರ್ತ್ತಣ್ಡನೆರೆವೊಡೆಗಣ್ಡನರ್ಮದಾನದ್ಯುಥ
10 ಯತಟರಾಜಹಂಸ ಮಾಳವಧೂಮಕೇತು ಮಣ್ಡವಕೊಟೋಲ್ಲಂಘನ
11 ಧಾರಾನಗರ ಕುತೂಹಳ ಮುಮ್ಮನಿಜಳಧಿಬಡವಾನಳಂ ಶ್ರೀಮ
12 ತ್ರೈಳೋಕ್ಯ ಮಲ್ಲದೇವ ಪಾದಾಬ್ಜ ಭೃಂಗ ಸಾಹಸೋತ್ತುಂಗ ನಾಮಾ
13 ದಿ ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮನೆ ವೆರ್ಗ್ಗಡೆದಣ್ಡನಾ (ಯಕಂ)
14 ಯಕಂ ಗುಣ್ಡಮಯ್ಯಂಗಳ್ ಸಕವರ್ಷ ೯೮೩ ನೆಯ ಶಾರ್ವರಿ ಸಂವತ್ಸ
15 ರದ ಭಾದ್ರಪದ ದಮಾವಾಸ್ಯೆ ಸೋಮವಾರದ ನ್ದು ರಾಜಧಾನಿ ಕಲ್ಯಾಣ
16 ದಿಕ್ಕಿಕ ವೀಡಿನೊಳ ಗ್ರಹಾರಪಿರಿಯೂರ ಪಿರಿಯ ಕೆ
17 ಱೆಗಾಯೂರ ಪನ್ನಾಯದ ಕುಳಿಯು ಪೆಜ್ಜುಂಕಮನಲ್ಲಿಯುಪೆರ್ವ್ವ
18 ರ್ವ್ವಾಸುದೇವ ಭಟ್ಟರ್ ..................
19 ಯ್ಯದೇಮಯ್ಯನತಿಕ್ಕಯ್ಯನಿಂತಿ ವರ್ಗ್ಗಧಾರಾಪೂರ್ವಕಂ ಮಾಡಿಕೊ
20 ಟ್ಟರು ಈ ಧರ್ಮಮನಾರೋರ್ವ್ವರ್ ಪ್ರತಿಪಾಳಿಸಿದರ್ ಕುರುಕ್ಷೇತ್ರವಾರ
21 ಣಾಸಿಪ್ರಯಾಗೆ ಅರ್ಘ್ಯ ತೀರ್ತ್ಥವಿಂತೀ ಪುಣ್ಯಸ್ಥಾನಂಗಳಂ ಸಾ
22 ಸಿರ ಕವಿಲೆಯಂ ವೇದಪಾರಗರಪ್ಪಸಾಸಿರ್ವರ್ಗ್ಗೆ ಕೊಟ್ಟ ಪುಣ್ಯಮನೆಯ್ದು
23 ವರೀ ಧರ್ಮ್ಮಮನಳಿದವರಾತೀರ್ಥ ಸ್ಥಾನದಲ್ಲಾ ಸಾಸಿರ ಕವಿಲೆ
24 ಯುಮನಾಸಾಸಿರ ವೇದಪಾರಗರು ಮನಳಿದ ಪಾತಕರ ಕ್ಕು
25 ಸ್ವದತ್ತಾಂ ಪರದತ್ತಾಂವಾಯೋಹರೇತವಸುಂಧರಾಂ ಷಷ್ಠಿ ವರ್ಷ ಸ
26 ಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ಸಾಮಾನ್ಯೋಯಂ ಧರ್ಮಸೇತು
27 ರ್ನೃಪಾಣಾಂ ಕಾಲೇಕಾಲೇ ಪಾಲನೀಯೋಭವದ್ಭಿಃ ಸರ್ವ್ವಾನೇತಾನ್ಭಾವಿನಃ ಪಾ
28 ರ್ತ್ಥಿವೇಂದ್ರಾನ್ಭೂಯೋಭೂಯೋಯಾಚತೇ ರಾಮಚಂದ್ರಃ ॥ ಶ್ರೀ ಶ್ರೀ ಶ್ರೀ

## 69

ಅದೇ ಆವಿನಹಳ್ಳಿ ಹೋಬಳಿ ಶೀತೂರಿಗೆ ಸಮೀಪ ಕೋಳೂರಿಗೆ ಸೇರಿದ ಫಾರೆಸ್ಟಲ್ಲಿ
ಪಾಳು ದೇವಾಲಯದ ನಿವೇಶನದಲ್ಲಿ.

1 ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರ
2 ವೇತ್ರೈಳೋಕ್ಯನಗರಾರಂಭ ಮೂಲಸ್ತಂಭಾಯಶಂ
3 ಭವೇ ಸ್ವಸ್ತಿ ಶ್ರೀಮತು ಯಾದವ ನಾರಾಯಣ
4 ಪ್ರತಾಪ ಚಕ್ರವರ್ತ್ತಿ ಸಿಂಘಣದೇವಂ ರಾಜ್ಯಂ
5 ಗೆ ಯ್ಯುತ್ತಿರ ಲಾತನಸರ್ವ್ವಾಧಿಕಾರಿ ಆರಿಯ ಮಲಿಸೆಟ್ಟಿ
6 ಯ ಪುತ್ರಂ ಮಾಹೇಶ್ವರಾ ಗ್ರಗಣ್ಯನು ಪೆನಿಸಿದ ಹೊಂ
7 ನಮನ ಪ್ರತಾಪಮೆಂತೆಂದೊಡ್ಡೆಉರದಿದಿ
8 ರಾಂತರಿಭೂಪರಸ··ಸಟ್ಟಿನೆಸೀಳಿದುತ್ತಮಾಂಗಮನಾ
9 .... ಮುಱಿದು ಪೊಡೆಸೆಂಡಾಡಲು ನೆಱೆದ ಪುದೆಹೊ
10 .... ರನೆಂಬ ಮದೇಭಂ ॥ ಅಂತಾತಂ ಸುಖಸಂಕಥಾ
11 ವಿನೋದದಿಂದಧಿಕಾರಂ ಗೆಯ್ಯುತ್ತುಮಿರ್ದ್ದು ಹೊಂನವುರ
12 ಮಾಹೇಶ್ವರ ದೇವರ ಪೂಜೆ ಅಂಗರಂಗಭೋಗಕ್ಕೆಂದು
13 ಆ ಯೂರಕೆಱೆಯ ಕೆಳಗೆ ಕಚ್ಛವಿಯುಗಳೆಯಲು ಮತ್ತರೆ
14 ರಡುಮಂಸರ್ವನಮಸ್ಯಮಾಗಿ ಬಿಟ್ಟುಕೊಟ್ಟಂ ಇದಕ್ಕಾಯೂರ
15 ಮಹಾಜನರೊಪ್ಪ ಇಂತಿದನಳಿದಂವಾರಣಾಸಿ
16 ಯಲ್ಲಿಪಾರ್ವ್ವರಕೊಂದ ಪಾತಕ ನಕ್ಕುಸ್ವದತ್ತಂ
17 ಪರದತ್ತಂವಾಯೋಹರೇತ ವಸುಂಧರಾಂ ಷಷ್ಠಿವರ್ಷ
18 ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ದಾಮೋ
19 ಜನಲಖಿತಮಂಗಳ ॥

## 70

ಥಾರಂಗಿ ಹೋಬಳಿ ಗೇರಸೊಪ್ಪೆ ನಗರಗೇರಿಬಸ್ತಿಯಿಂದ ಗೋವರ್ಧನಗಿರಿಗೆ ಹೋಗುವ ದಾರಿಯಲ್ಲಿ ಎಡಭಾಗಕ್ಕೆ ಬಿದ್ದಿರುವ ಕಲ್ಲು.

1 ಸ್ವಸ್ತಿ ಶ್ರೀಮತು ಚೆಂನಭೈರಾದೇವಿ
2 ಅಮ್ಮನವರು ನಗರ ರಾಜ್ಯವನಾಳು
3 ವಲ್ಲಿ ವಿಳಂಬಿ ಸಂವತ್ಸರದ ಭಾದ್ರಪದ
4 ಶು ಚತುರ್ದಶಿಯಲ್ಲು ಗೋವರ್ಧನ ಗಿ
5 ರಿಯ ಹನುಮಂತೇಶ್ವರ ದೇವರ ನಂದಾ
6 ದೀಪ್ತಿ ಧರ್ಮ್ಮಕ್ಕೆ ಕಣಿಗಲಮಕ್ಕೆ
7 ಯಮೇಲುಭಾಗೆ ಗದ್ದೆಯನೂ ಅವೂ
8 ರಸೇನದೋವ ತಿಂಮರಸಯ್ಯನು ತನ್ನ
9 ಸ್ತ್ರೀ ಪುತ್ರಜ್ಞಾತಿ ಸಾಪಂಂತದಾಯಾದಾನು
10 ಮತದಿಂದ ಸ್ವರುಚಿಯಿಂದ ಸರ್ವಮಾನ್ಯ
11 ವಾಗಿ ಬಿಟ್ಟ ಯಿಂತಪ್ಪುದಕ್ಕೆ ಮಹಾಜನಗಳು
12 ಸಾಕ್ಷಿ ಇದಕೆ ತಪಿ ನಡೆದವನ ಬಾಯ
13 ಲಿ ................

## 71

ಅದೇ ಹೋಬಳಿ ಗೋವರ್ಧನಗಿರಿಗೆ ಹೋಗುವ ದಾರಿಯಲ್ಲಿ ಕಾನೂರಿಗೆ ಸೇರಿದ ಜಂಗಲಿನಲ್ಲಿ ಹಾಳು ಮಂಟಪದ ಬಳಿ ಬಿದ್ದಿರುವ ಕಲ್ಲು.

1 ಪ್ರಮಾದಿ ಸಂವತ್ಸರದ ಚೈತ್ರ ಸುದ್ಧ ೧೪
2 ....ವಾರ ಶ್ರೀಮತು ಜಗದೇವ ಸಿಂಗಿ ದೇವರ
3 ಸರು ದುಗ್ಗವೆಗ್ಗಡೆಯ ಮಗ ಬಮ್ಮ
4 ಣ ಹೆಗ್ಗಡೆ ಸ್ವಾಮಿ ಕಾರ್ಯಕ್ಕೆ ಬಂದು
5 ಮಳಲಿಯ ಸಿಂಗಜ್ಜನಕೂಡೆ ಕಾದಿ
6 ಯಳಿಯಲು ದುಗ್ಗವೆಗ್ಗಡೆಗೆ ಬಿಟ್ಟ
7 ಧೂಮಿ....ಯೊನ್ದುಸಬ್ಬ—ಪರಿ
8 ಹಾರವಾಗಿ ಬಿಟ್ಟರು ಇದಕೆ ಅಳಿ.
9 ದವ ನರಕಕೆ ಇಳಿವ ......
10 .........ಕೊಂದ ಪಾಪ

---

## ಶಿಕಾರಿಪುರತಾಲ್ಲೋಕಿನ ಶಾಸನಗಳು

## 72

ಉಡುಗಣಿ ಹೋಬಳಿ ಕಡೆನಂದಿ ಹಳ್ಳಿಗೆ ಸುಮಾರು ೧ ಮೈಲಿ ದೂರದಲ್ಲಿ ಪಾಳು ದೇವಾಲಯದ ಬಳಿ ಬಿದ್ದಿರುವ ಕಲ್ಲು (ಸಮಾಧಿಯ ಕಲ್ಲು)

ಪ್ರಮಾಣ 3′—6″×2′—6″

1 ಸ್ವಸ್ತಿ ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪ ಸಮಾ
2 ಧಿಶೀಲಗುಣ ಸಂಪನ್ನರುಂ ಯಜನ ಯಾಜನ ಪ್ರಮುಖ
3 ಷಟ್ಕರ್ಮ್ಮ ನಿರತರುಂ ಶ್ರೀಮನ್ಮಹಾಹೊಂನ ಪುರದ ದೇವಯ್ಯಂ
4 ಚಾಳುಕ್ಯ ವಿಕ್ರಮ ಕಾಲದ ೫೬ನೆಯ ಪ್ರಮೋದೂತ ಸಂವತ್ಸರದ ಶ್ರಾವಣ ಬ ೧೦
5 ಲು ಮಾಹೇಶ್ವರ ಪದಮನೇರಿದೊಡಾತನ ಶಿಶ್ಯಂವಾಮದೇವಯ್ಯಂ
6 ನಿಲಿಸಿದ ಸಮಾಧಿಯ ಕಲ್ಲು ಮಹೇಶ್ವರಾಮಂಗಳ ॥

## 73

ಅದೇ ಹೋಬಳಿ ಕಡೆನಂದಿ ಹಳ್ಳಿಗೆ ಸಮೀಪದಲ್ಲಿರುವ ಬಾಳಂಬೀಡು ದೇವಾಲಯದ ಬಳಿ ನಟ್ಟ ಕಲ್ಲು.

ಪ್ರಮಾಣ 5′—6″×3′—9″

1 ಸ್ವಸ್ತಿ ಅಸೀದಶೇಷನರ ಪತಿಮಕುಟಮಣಿಮಯೂಖ ಮಂಜರೀ ರಂಜಿತ ಪಾದಪೀಠಃ ಪ್ರತಾಪದವದಹನ ಜ್ವಾಳಾವ
2 ಳೀಸಮಾಲೀಢಾನಮ್ರಪಾರ್ತ್ಥಿವಸ್ಸಕಳದಿಗ್ವಿಜಯೋಪಾರ್ಜ್ಜಿತ ವೀರಲಕ್ಷ್ಮೀಸಮಾಲಿಂಗಿತ ವಿಶಾಲವಕ್ಷಸ್ಥಳೋದಾನವಾರಿ ಸಂಸಕ್ತ
3 ವಿಬುಧ ಮಧುಕರ ನಿಕರೋ ಜಳನಿಧಿರಿವ ರತ್ನಾಕರೋ ನಾರಾಯಣ ಇವ ಲಕ್ಷ್ಮೀನಿವಾಸಶ್ಶಶಾಂಕ ಇವಕಳಾಧರಃ ಪ್ರಭಾಕರ ಇವೋಗ್ರ ಪ್ರತಾಪ
4 ಶ್ಚತುರಾನನ ಇವ ಪ್ರಜಾನಾಥ ಸ್ಸೇನಾನಿರಿವಾ ಮೋಘ ಶಕ್ತಿಧರೋ ಭೂತನಾಥ ಇವ ಭೂಧರ ಶಿಖರಾಧಿವಾಸೋಂ ಗಜ ಇವಾಂಗನಾಜನ ಮನಃ
5 ಕ್ಷೋಭ ಜನನೋ ಪರಾಜಿತ ಇವಾ ರ್ತ್ಥಿಪತಿಃ ಕಲ್ಪಪಾದಪ ಇವ ಪ್ರಾರ್ತ್ಥಿತಾರ್ತ್ಥಪ್ರದಃ ಕೀರ್ತ್ತಿ ಸುಧಾಧವಳಿತ ಬ್ರಹ್ಮಾಂಡ ಕುಹರಶ್ಚೇರ ಚೋ
6 ಳ ಕೊಂಕಣ ಗುರ್ಜ್ಜರ ಮಾಳವ ಕಶಿರವ ಪಾಂಚಾಲ ಗೌಡಕಲಿಂಗಾಂಗವಂಗ ಮಹೀಪತಿ ಸಂಪಾದಿತಾ ಕ್ಷಯ ಕೋಶಃ ಕೋಶಸಲ

7 ಲನಿಮಜ್ಜಿತಾ ಶೇಷ ವೀರಮಹೇಶಃ ಈಶಚರಣಾರವಿನ್ದ ಮಧುಕರಃ ಕರಸಂ ವರ್ದ್ಧಿತ ನಿಖಿಲ ಭುವನೋ ವ ನಾರಿ ಕೇತು ರಿವಾಮೋ

8 ಘ ಶರಾಸನ ಕಾರ್ಯ್ಯಾಃ ಕಾರ್ಯ್ಯಾಕಾರ್ಯ್ಯ ವಿವೇಕಚಾತುರ್ಯ್ಯ ವಾಚಸ್ಪತಿ ರ್ವಾಚಸ್ಪತಿ ಸದೃಶ ವಿವಿಧ ವಿಬುಧ ಬೋಧೋಧ್ಯಾಯಮಾ

9 ನ ಮಾನಸಾನನ್ದಕಾರಃ ಶ್ರೀಮಜ್ಜಯ ಸಿಂಹ ದೇವಶ್ಚಾಳುಕ್ಯಾ ಭರಣಃ ॥ ತಸ್ಯಾತ್ಮಜ ಶ್ಯತ್ರುವಿಳಾಸಿನೀನಾಂ ವೈಧ ವ್ಯದೀಕ್ಷಾ ಗುರುರಾಹವೋ

10 ತ್ಯಃ ಸಂಶಾಸ್ತಿಗಾ ಮಾಹವಮಲ್ಲದೇವೋನಿಷ್ಕಂಟಕಾ ಮಪ್ರತಿ ವೀರಶಬ್ದಃ । ಯಸ್ಯಪ್ರತಾಪ ದಹನಾನಳ ವಿಸ್ಪುಲಿಂಗೈ ರ್ನ್ನಿರ್ಮ್ಮೂಳಿತಾಶ್ಯತ್ರು ಮಹೀರು

11 ಹಾಘಾಃ ಅದ್ಯಾಪಿ ರೋಢುಮವನೌನಹಿತೇಕ್ಷಮನ್ತೇ ಭೂಕಂಟಕೋದ್ಧರಣ ಯತ್ನಪರಾಯಣಸ್ಯ ಯಃ ಕೊಂಕಣಾ ನ್ಭಣ್ಡಿ

12 ತಮಾನದಪ್ರಾನಕಾರ್ಷೀದ ಕ್ಷತಸತ್ಯವಾದಃ ಸಂತ್ಯಾಜಿತಾನಿಂದಿತ ರಾಜಚಿಹ್ನಾನ್ಭೂತಾನ್ವತಾನಲ್ಪವ ಸೂಂಧ್ಭು ಥಂಯುಃ

13 ಧಾರಾಪಿಯೇನೋದ್ಧತ ವಿಕ್ರಮೇಣ ಸಂಧರ್ಷಿತಾಪೂರ್ವ್ವ ಮಹೀಪತೀನಾಂ ಆಧರ್ಷಣೀಯಾ ಬಲಗೊಂಕ ಮುಖ್ಯ ಪ್ರಚಣ್ಡನಾಮಾ

14 ನ್ತ ಪುರಸ್ಸರೇಣ . ಲಂಕಾನಾಥ ಸಮಾನ ಚೋಳನೃಪತಿಂ ಯಸ್ಸಂಯತಿ ಪ್ರಾವೃತಂ ನಾಗಾನಾಂದಶಭಿಶ್ಯತೈರಧಿ ಬರೈಸ್ಸನ್ನಾಹಿ

15 ಭಿಸ್ಸತ್ವರೈಃ. ಏಕೋರಾಘವ ವಜ್ಜಘಾನ ನಿಶಿತೈರ್ಬ್ಬಾಣೈರನಾ ಯಾಸತೋ ಭೂದೇವೋಮಹಿತಾಯಸನ್ನುತಿ ಪದಂಚಾಳು

16 ಕ್ಯರಾಮೋಬಲೀ ಶ್ರೀಮಾನಾಹವಮಲ್ಲೋ ವಿದ್ಯಾಶೌರ್ಯ್ಯಾ ನ್ವಿತೋಧರಾಂ ಶಾಸ್ತಿಧರ್ಮ್ಮಾರ್ತ್ಥಮಾನ ಹೇತುವ್ಯಾ ಪಾರೈಕವ್ರತಶ್ಚ

17 ರಾಯೈಕಃ ॥ ತಸ್ಮಿನ್ನರ ಪತೌಮಹೀಂಶಾಸತಿ ವರ್ಣ್ಣ ಸಂಕರೋವ್ಯುತ್ಪನ್ನ ಕಾಯಸ್ತೇಭ್ಯೋನ್ಯತ್ರದುರ್ಲ್ಲಕ್ಷಸ್ತಸ್ಕರ ಶಬ್ದಃ

18 ಸ್ವರೂಪವಾಚಕೋವೈಯ್ಯಾಕರಣ ಇವಾರ್ತ್ಥಬಾಧಾತ್ಸಂವೃತ್ತಃ ಉಪಸರ್ಗ್ಗಶ್ಚ ಧಾತುಪ್ರಯೋಗಾ ದನ್ಯತ್ರದು

19 ರ್ದ್ದಶ್ಯೋರ್ಗೀ ವಿಗ್ರಹಶ್ಚ ಸಮಾಸ ತದ್ಧಿತ ವ್ಯಾಖ್ಯಾನಾದ ನ್ಯತ್ರತತ್ಪರಿ ಪಾಲಿತಾಯಾಧರಾಂಗನಾಯಾ ಮುಖಜವನ ವಾಸಿದೇ

20 ಶೋರಮಣೀಯ ಸ್ತತ್ತಿಲಕ ಇವ ಮಹಾತಟಾಕ ಗ್ರಾಮೋ ರಾಜತೇ ॥ ಯತ್ರ ದ್ವಿಜಾಶ್ಯಮದಮಾದಿ ಗುಣೈರು ಪೇತಾ ಸ್ವಾಧ್ಯಾಯ

21 ಯಜ್ಞ ಜಪ ಹೋಮ ಸಮಾಧಿನಿಷ್ಠಾಃ ಅಧ್ಯಾಪನಾಧ್ಯಯನ ಯಾಜನದಾನ ಮುಖ್ಯೈಸ್ತ್ರ ಷ್ಟಟ್ಕರ್ಮಭಿನ್ನಿಜಗೃಹೇಷು ಸದಾ ರ ಮನ್ತೇ ॥

22 ಯತ್ರತ್ಯ ಪಂಡಿತ ಜನೋ ವಿದುಷಃ ಪೃಥಿವ್ಯಾಂ ವಾದೇ ವಿಜಿತ್ಯ ವಿಜಯಂ ನಿಜಮಾತನೋತಿ ವ್ಯಾಖ್ಯಾನ ಚಿಂತನ ವಿಚಾರಣ

23 ವಾದ ಶಿಕ್ಷಾ ವ್ಯಾಪಾರ ವರ್ಗ್ಗ ಚತುರಃ ಪೃಥಿವೀ ಪ್ರದೀಪಃ ॥ ಯತ್ರ ತ್ಯಾಧ್ಯೇತಾ ರೋ ಗ್ರಸ್ತ ನಿರಸ್ತಾದ್ಯು ಚ್ಚಾರಣ ದೋಷವಚ್ಛ್ಯತಂ

24 ಸ್ವರವರ್ಣ್ಣಪದ ಕ್ರಮಸಂಹಿತಾ ಯಥಾ ಲಕ್ಷಣ ಮಧೀಯಾನಾಃ ನಿಜೋತ್ಕರ್ಷಮಪೇಕ್ಷಮಾಣಾ ಸ್ಸಹಸ್ರಂ ವಿಂಶ ತಿಂಚ

25 ತ್ವಾರಿಂಶತಮಶೀತಿಂಶತಂ ವಿಂಶತ್ಯುತ್ತರಂಚ ವಾರಾನ್ ಸದಸ್ಯಧೀಯತೇ ಯತ್ರ ಕಲ್ಪ ಸೂತ್ರ ಶ್ರಾವಣಶ್ಚಾತ್ರಾ ಸ್ಯಯಂ ಪರಿಕ

26 ಲ್ಪತೈಷ್ಟಿಕ ಪಾಶುಕಸೋಮಿಕ ವೇದಿಕಾಃ ಸ್ವಪರಿಕಲ್ಪಿತಾಹವನೀಯಾದ್ಯಗ್ನಯಃ ಸ್ರೂಪ್ರೈೇಕ್ಷಿತ ಪತ್ನೀಶಾಲಾ ಸಂದೋಹ (ಹ) ವಿದ್ವಾರ್ಗ

27 ನಚಾತ್ವಾಲ ಶಾಮಿತ್ರ ಮಾರ್ಜ್ಜಾಲೀಯಾಗ್ನಿಧ್ರ್ಯಧಿಷ್ಣ್ಯ ಸ್ತಾರ ಪ್ರದೇಶಾಸ್ತತ್ತತ್ಕೃತು ಪ್ರಯೋಗಂ ಸದಾಭ್ಯಸ್ಯಂ ತ್ಯೇವಮಾದಿಗು

28 ಣಾಲಂಕಾರಾಯಾ ಶೇಷಗ್ರಾಮ ಮಹಾಜನಾಯ ಪಾದಪೂಜಾಂ ದತ್ವಾ ಶಕ ನೃಪಾತೀತ ಸಂವತ್ಸರೇಷು ನವಶತೇ ಷ್ವೇ ಕೋನಾಶೀತ್ಯಧಿಕೇಷು

29 ವಿಳಂಬಿ ಸಂವತ್ಸರ ವೈಶಾಖ ಶುದ್ಧ ತೃತೀಯಾಯಾ ಮಾದಿತ್ಯವಾರೇ ಕುಡುವಣ್ಣಿಯಾಂಗೀರಸ ಗೋತ್ರ ಶ್ರೀಧರೋ ಪಾಧ್ಯಾಯ ಸೂನು

30 ಪ್ರಭು ಮಹಾದೇವಯ್ಯ ಅನ್ತರ್ವ್ವೇದಿ ಆವಣಗ್ರಾಮ ಸಮುದ್ಭೂತಾ ತ್ರೇಯ ಗೋತ್ರಾ ಅಡುದ್ವಿವೇದಿಸೂನು ಮಾರ್ಗ್ಗ ನಾಯಕಹೊ

31 ಲಗೆ ಜೆಗ್ರಾಮವಶಿಷ್ಠ ಗೋತ್ರ ಗೋವರ್ದ್ಧನನಾಗದೇವ ಸೂನು ಗೊಹಳಯ್ಯ ಕುಂಟನ ಕೆಚೆಯೂರಟ್ಟ ಹರಪೊಲೆ

32 ಯಮ್ಮನ ಮಗ ಕಲಿಯಣ ಸೆಟ್ಟಿ ಸಿಂಗಣಸೆಟ್ಟಿ ಚಿಟ್ಟಬೆಯ ಚಿಟ್ಟಯ್ಯಂ ನಾಕಸೆಟ್ಟಿಯ ಮಾಳಯ್ಯಂ ಮಾಳಕ್ಕನ ಬಸ ವಸೆ

33 ಟ್ಟಿ ಅರ್ಜ್ಜುನಯ್ಯನ ಸೋವಯ್ಯ ಬಾಗುಳಿಯ ಮುದ್ದಯ್ಯನ ಬೇಳಯ್ಯ ಅತ್ತಲೂರ ಸಂಗಪಯ್ಯನ ಚಿ

34 ಕ್ಕ ಬಾಯಿಸೆಟ್ಟಿ ಕೇತಿಸೆಟ್ಟಿಯ ಮಗಂ ಮಸಣಯ್ಯ ಅಂಗಡಿಯ ಸತ್ತಿಯಣಸೆಟ್ಟಿ ಇತ್ಯೇತನ್ನಾಮಾನಃ ಸರ್ವ ಶಿರಾಶಂಕು

35 ಕೃಷ್ಣ ತಟಾಕ ಕ್ಷೇತ್ರಮುನನ್ಯೋಪಾಯೋಗ್ಯ ತತ್ತಟಾಕ ಜಲಂ ಸರ್ವ ಪರಿಹಾರಂ ಮಹಾಜನಾದಾದಾಯ ತದನು ಮತ್ಯಾ ಚಂದ್ರ

36 ತಾರಮಣ್ಣುಜೇಶ್ವರಾಯ ಮುಕ್ತವನ್ತಃ ॥ ಏತದ್ಯೇ ಪರಿಪಾಲಯುನ್ತಿ ತೇಷಾಂ ದಾನಸಮಂ ಫಲಂಯೇತ್ವೇತನ್ನಾ ಶಯಂತಿ

37 ಭ್ರೂಣ ಹತ್ಯಾ ಸವೋದೋಷ ಸ್ತಥಾಚಾಹ ದೇವಸ್ವಂಬ್ರಾಹ್ಮಣಸ್ವಂಚ ಲೋಭೇನೋಪ ಹಿನಸ್ತಿಯಃ ಸಪಾಪಾತ್ಮಾ ಪರೇಲೋ

38 ಕೇಗೃದ್ಯೋ ಚ್ಛಿಷ್ಮೇನಜೀವತಿ ವಾದೀಥ ಪಂಚಾನನ ಭಟ್ಟ ವಿಷ್ಣು ಶ್ಯಾಸ್ತ್ರಾಂ ಬುಧೇಜ್ಯಾರಮಿತಸ್ಸು ವೃತ್ತಃ ಅಣ್ಣುರ

39 ಶಂಭೋಲ್ಪದ ಪದ್ಮ ಭ್ರಿಂಗಃ ತತ್ಕ್ಷೇತ್ರಲೇಖಾ ವಚನಂ ವ್ಯಧತ್ತತದ್ಗ್ರಾಮ ಜನ್ಮಾತಿಲಕಃ ಕುಲಸ್ಯ ದೇವದ್ವಿಜಾ

40 ಗ್ಯ್ರಾರ್ಚನದತ್ತಚಿತ್ತಃ ಗ್ರಾಮ ಪ್ರಯುಕ್ತ್ಯಾ ಲಿಖಿತಂ ವ್ಯಧತ್ತ ಸದಕ್ಷರಂ ಕಾಶ್ಯಪ ಮಾಧವಾಖ್ಯಃ

41 ಮಹಾ ಗ್ರಾಮ ರೊಕ್ಕೆ ಗುಣ್ಡಿಯನಾಗವರ್ಮ್ಮೀ ಜರಳಿಯರೂವಾರಿನಾಕಿಯ ಲಿಖಿತ ಮಂಗಳಂ ಶ್ರೀ

## 74

ಅದೇ ಹೋಬಳಿ ಬಿಸಲಹಳ್ಳಿ ಫಾರೆಸ್ಟಿನಲ್ಲಿ ಹೂಲಿಮರದ ಕೆಳಗೆ ತುಂಡಾಗಿ ಬಿದ್ದಿರುವ ಕಲ್ಲು..

1 ಸ್ವಸ್ತಿಯಮ ನಿಯಮಸ್ವಾಧ್ಯಾಯ
2 ಧ್ಯಾನಧಾರಣ ಮೌನಾನುಷ್ಠಾನ ಜಪ
3 ಸಮಾಧಿಶೀಲಗುಣಸಂಪನ್ನರಪ್ಪಶ್ರೀ
4 ಮದನಾದಿಯಗ್ರಹಾರ ಹಿರಿಯೂರಸ್ಥಾ
5 ನಾಧಿಪತಿ ಶ್ರೀಮನ್ಮಹಾ ·· ಬೊಮ್ಮಯನಾಯಕನು
6 ನಮಶ್ಶಿವಾಯವಾಗಿ ··········
7 ಶ್ರೀಮತು ಪ್ರತಾಪ ಚ··········
8 ಕ್ರವರ್ತಿಸಿಂಘಣದೇವವರ್ಷ ೦ನೆಯಧಾತುಸಂವತ್ಸರ
9 ··········ಚಿಟ್ಟುರಲಬಿಟ್ಟುದುಕಚ್ಚವಿಯ····
10 ಳೆಯ ·················

## 75

ಅದೇ ಹೋ। ಬಸವನಂದಿಹಳ್ಳಿ ಗ್ರಾಮದ ಗುಡ್ಡದ ಬುಡದಲ್ಲಿರುವ ಕೆರೆ ಕಟ್ಟೆಗೆ ಸೇರಿಸಿರುವ ಕಲ್ಲು.

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯ
2 ನಗರಾರಂಭ ಮೂಲಸ್ತಂಭಾಯ ಶಂಭವೇ ಸ್ವ
3 ಸ್ತಿ ಶ್ರೀಮತು ಯಾದವನಾರಾಯಣ ಭುಜಬಳ
4 ಪ್ರೌಢಪ್ರತಾಪ ಚಕ್ರವರ್ತಿ ಶ್ರೀರಾಮಚಂದ್ರ ರಾಯರಾ
5 ಜ್ಯೋದಯದ ೧೧ನೆಯ ಚಿತ್ರಭಾನು ಸಂವತ್ಸರ ಭಾದ್ರಪದ
6 ಸೋಮವಾರದಲು ಶ್ರೀಕೊಂಗಾಲ ಬಂಕಣ········ಮನ್ನೆಯ
7 ದೇವರ ಪರುವತ ವೊಡೆಯರಳಿಯ ಹಡೆವಳನಕೂಡೆ
8 ಕಾದಿ ಸುರಲೋಕ ಪ್ರಾಪ್ತನಾದ॥ಶ್ರೀ

## 76

ತಾಡಗುಂದ ಹೋ॥ ಚಿಕ್ಕಮಾಗಡಿಗೆ ಸೇರಿದ ಕಾನಿನಲ್ಲಿ ಹಳ್ಳದಬಳಿ ಬಿದ್ದಿರುವ ಕಲ್ಲು.

ಪ್ರಮಾಣ 3′–6″×2′–6″

1 ಸ್ವಸ್ತಿಶ್ರೀ ಮಾರಾರ್ಕ್ಕ ಅರಸರ್ ಬನವಸ ಮೂ
2 ವತ್ತಿರ್ಚ್ಛಾಸಿರಮನ್ಆಳೆಬನ್ದನಿಕ್ಕೆಯನಾಟ್ಟವು
3 ಣ್ಣನಾದಿಗಾವುಣ್ಣನ್ ತಮ್ಮಾಳ್ದ ನಿಱಿಯ ಎರಗನೊಳ್ಕೂಡಿ
4 ಕಾದಿ ಅಳಗರಕುಪಾಸದೊ········ರ·········
5 ·········ಸರ್ಗ್ಗಾಲಯಪೊಕ್ಕ ············ (ಕಲ್ಲು ಚಕ್ಕೆ ಯೆದ್ದುಹೋಗಿದೆ)

## 77

ಅದೇ ಹೋಬಳಿ ಬನ್ದಣಿಕೆ ದೇವಾಲಯಕ್ಕೆ ದಕ್ಷಿಣ ಬಿದ್ದಿರುವ ತುಂಡುಕಲ್ಲು.

1 ······ ರಕ್ತಾಕ್ಷಿ ಸಂವತ್ಸರದ ಶ್ರಾವಣ ಶುದ್ಧ ೧೦ ಗು
2 ·········· ನಾಳ್ಪ್ರಭು ಬೊಂಮ್ಮ ··········
3 ಆತನಮಗ ಮಾದರ್ಸನು ತಂಮ ಸೋಮಂಣನು ಆ
4 ······ ೦ಗೆ ಮಸರೆಯಲ ಗಉಡನ ಮಕಳು ಕಾಳಬೊಂಮ
5 ಸೋಮದಾಯಾದತನದಿಂ ಕಂನವನಿಕ್ಕಿ ಯಿಱಿಯೆ
6 ತಮ್ಮ ಮಕ್ಕಳು ಹೆಂಡಿರಕೂಡಿ ಹುಯ್ಯಲನೆಬ್ಬಿಸಿ ······
7 ······ ಕೊಂದು ತಾನುಂ ಶಿವಪಾದದೊಳ್ಕೈಕ್ಯನಾದಂ ······

---

## 78

ಆನವಟ್ಟಿ ಹೋ। ಗುಮ್ಮನಹಾಳು ಹಳೇಗ್ರಾಮದ ಪಾಳುದೇವಾಲಯದ ಹಿಂದೆ ಬಿದ್ದಿರುವ ತುಂಡುಕಲ್ಲು.

(ಮೇಲುಭಾಗ ಹೋಗಿದೆ) (ಎಡಭಾಗ ಸ್ವಲ್ಪ ಚಕ್ಕೆಯೆದ್ದುಹೋಗಿದೆ)

1 ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರ
2 ಕ್ಯಾಭರಣ ಶ್ರೀಮದ್ಭುರೋಕ ಮಲ್ಲದೇವರ ವಿಜಯರಾ
3 ಪ್ರವರ್ದ್ಧಮಾನ ಮಾಚಂದ್ರಾರ್ಕ್ಕತಾರಂ ಸಲುತ್ತುಂ ಕಲ್ಯಾಣದ
4 ಸುಖಸಂಕಥಾ ವಿನೋದದಿಂ ರಾಜ್ಯಂಗಯ್ಯುತ್ತುಮಿರೆ
5 ದತೀರದ ಕರಶಾಣಿಯೆನಲು ತಾನಾಸೀಲತೆಯಿಮೆಸೆವ
6 ತಿಪ। ಆತನನ್ವಯಾಗಮ ಪ್ರಶಸ್ತಿ ಯೆಂತೆಂದಡೆ ಸ್ವಸ್ತಿಸಮಧಿ
7 ಗೀಸ್ವರ ಬನವಾಸಿ ಪುರವರಾಧೀಶ್ವರ ಜಯನ್ತೀ ಮಧುಕೇಶ್ವರ
8 ······ ದೇವ ಪ್ರತ್ಯಕ್ಷಾಕ್ಷ ಸಂಧವ ಚತುರಾಶೀತಿ
9 ಸುವರ್ಣ್ನಗರುಡಧ್ವಜ ಜಗದ್ವಿದಿತಾಷ್ಟಾದಶ
10 ದ್ರಶಿಖರಿ ಶಿಖರ ಸಂಸ್ಥಾಪಿತ ಸ್ಫಟಿಕ
11 ಶ್ರೀಮಯೂರವರ್ಮ್ಮ ಮಹಾಮಹೀ ಪಾಳಕ
12 ······ ವಿರಾಜಮಾನ ಮಾನೋನ್ನತರುಂ ವಿರಾಜಿತರಪ್ಪ

## 79

ಅದೇ ಹೋ। ಹಿರೇಚವುಟಿ ಗ್ರಾಮದ ಎಲ್ಲೆಯಲ್ಲಿ ಏಮನೂರು ಪಗಮೇಶ್ವರದೇವಾಲಯದ ಬಳಿಯಣ ಕಲ್ಲು.

ಪ್ರಮಾಣ 5′–6″×4′–0″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ। ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ಶ್ರೀಗಿರಿ ಶಂರವೀಂ
2 ದು ಸಲರಾತ್ಮ ವಿಚ್ಚಿಖಿಭೂಮರುತ್ಸಮುದ್ಯೋಗನುತಾಷ್ಟಮೂರ್ತ್ತಿ ಭುವನಸ್ಥಿತಿಕಾರಣನೀಶ್ವರ
3 ಜಯಸಿಂಗ ನೃಪಂಗೆ ತಾಂ ಮಸಣಸೆಟ್ಟಿಗೆ ಮಾನ್ಯದಯಾಪರಂಗೆ ಹೃದ್ರಾಗದೆ ನೇಸಬುನೆಲನುವುಳ್ಳಿನಮೀಗೆ
4 ಮನೋರಥಂಗಳ ‖ ಮಂಗಳಮಂ ಮಾಡುಗೆ ಜಯಸಿಂಗನೃಪಂಗೆ ನೆಗದ್ದೆಮ್ಮಯನೂರಾದೇವಂ ಗುಣನಿಧಿಕಾ ಮಗಾ
5 ವುಡಂಗಿಂತೀ ನೆಲನುಯಿನವುಳ್ಳಂನೆವರಂ ‖ ಸ್ವಸ್ತಿಸಮಸ್ತಭುವನಾಶ್ರಯಶ್ರೀ ಪ್ರಿಥ್ವೀವಲ್ಲಭಂ ಕಳಚುರ್ಯ್ಯಕುಳಮಹಾ ಭೂಷ
6 ಣ ಭುಜಬಳ ಚಕ್ರವರ್ತ್ತಿ ಮಹಾರಾಜಾಧಿರಾಜನೆನಿಸಿ । ಪರಭೂಪಾಳಕರಂ ಪಳಂಚಲೆದುದೋರ್ವ್ವಿಕ್ರಾಂತದಿಂ ತ್ಯಾಗದಿಂ
7 ನೆರದರ್ತ್ಥಿಪ್ರಕರಕ್ಕೆಮಾಡಿ ಮುದಮಂ ಕಾರುಣ್ಯದಿಂ ಕಾದು ತತ್ಸರಣಾಯಾತರನಾತ್ಮ ಸತ್ಯಗುಣದಿಂ ಮರ್ಯಾದೆಯಿಂ
8 ದಾಳ್ವನಾದರದಿಂ ಕುಂತಳಚಕ್ರವರ್ತ್ತಿ ವಿಜಯಾದಿತ್ಯಂ ಮಹೀಚಕ್ರಮಂ ‖ ತತ್ಪಾದಪದ್ಮೋಪಜೀವಿ‖ನೆಗಳೆ ಜಯಂ ಪೊಗಳೆ ಜ[ಗಂ]
9 ······ಮಿಗೆ ತನ್ನಳವಳಿಯ ಬೊಮ್ಮಯ್ಯಂ ಪಾಳಿಸುವಂ ನೆಗರ್ದ್ದೀ ಬನವಸೆನಾಡಂದಿಗಿಭಂಬರ ವೈಯ್ದೆ ಕೀರ್ತ್ತಿ ಲತೆಯುಂ ಶ್ರೀಯುಂ।
10 ······ ನತನ್ನಪಾಳರು ಬೇಡೆ ಪಣಿಂಚಲೆದರ್ತ್ಥಮನರ್ತ್ಥಿಗಿತ್ತು ಸಾಮದಿನಶ್ಯಾಸೆ ದಾಜಿರಾಜಮಹಿಮಂ ಪ್ರತಿಪಾಳಿಸುವಂ ನಿರಂತ
11 ಬನವಸೆ ನಾಡನಾದವೆಕದಂಬರ ಸಂತತಿ ಸೋವಿದೇವ ನತ್ಯನುಪಮ ವಿಕ್ರಮಂನೆಗಳೆ ತಂನ ಸಮುಂನತಕೀರ್ತ್ತಿ ಧಾತ್ರಿಯೊಳು ‖
12 ಬನವಸೆ ದೇಶದೊಳು ನೆಗರ್ದ್ದನಾಗರ ಖಂಡದೊಳ್ಸಾರಮಾದುದಾ ಜನಪದದೊಳು ವಿರಾಜಿಸುವ ಕೆಯ್ವೊಲದಿಂವನದಿಂ ತಟಾಕದಿಂ
13 ······ ನರುಹಷಂಡದಿಂ ಬಳಸಿನಾಡೆಮನಂಗೊಳಿ ಪೆಮ್ಮನೂರಿಳಾಜನಜನಿತಾನುರಾಗ ವಿಧವೋದಯಮಕ್ಷತಸೌಖ್ಯ ಸಂಪದ ······
14 ಪರಹಿತ ಚರಿತಂ ಸತ್ಯಾಭರಣಂ ಧನದ ಚಾರುದತ್ತಸಮಾನಂ ನಿರವದ್ಯವೇಂಬಣ್ಣಿಧರೆಮಾಣಕಕೇತಿಸೆಟ್ಟಿಯ
15 ಜಗದೊಳು ‖ ಜಳನಿಧಿಯೊಳು ಹಿಮಧಾಮಂಕುಳಗಿರಿಯೊಳು ಸಿಂಹವೋಗೆವವೊಲೊಗೆದಂ ನಿಮ್ಮ್ನಳಕೀರ್ತ್ತಿಕೇತಿ
16 ಸೆಟ್ಟಿಗೆ ಲಲತಾಕೃತಿಯೆಮ್ಮನೂರಕಾಮಗವುಣ್ಡಂ। ಧರ್ಮ್ಮದಕಣ್ ಸತ್ಯದನಿಧಿ ಪೆರ್ಮ್ಮೆಯನೆರೆ ಭೋಗದಾಗರಂ ವಿಜಯ
17 ವರ್ಮ್ಮಂ ಕಾಮಗಾವುಂಡಂ ನಿಮ್ಮ್ನಳತರಕೀರ್ತ್ತಿವಿಕ್ರಮಾಳಂಕಾರಂ। ಶರಣಾರ್ತ್ಥಿಬ್ರಜರಕ್ಷಣಕ್ಕೆ ವಿನಯಕ್ಕಾಪ್ಪಿನಂಗೆ ಕೂಪ್ಪಿನಂಗೆ

18 ದೇವದ್ವಿಜರಾಜಪೂಜೆಗಸಕ್ಯನ್ನೋಟಕ್ಕೆ ಕೂಟಕ್ಕೆ ದುರ್ಧರವೀತೌಘಜಯಕ್ಕೆ ಪೋಲಿಪೊಡೆ..........

19 ............ತದನನ್ತರಮಾ ಮಹಾಪುರುಷಂ ಕಾಮಗಾವುಂಡಂ ಶ್ರೀರಾಮೇಶ್ವರ ದೇವಾಲಯದ ಜೀರ್ಣ್ನೋ-
ದ್ಧಾರಕ್ಕಂ ನಿತ್ಯಪೂಜೆಗಂ ನಿತ್ಯನಿವೇದ್ಯಕ್ಕಂ

20 ಶ್ರೀಮಚ್ಚಾಳುಕ್ಯ ಚಕ್ರವರ್ತ್ತಿ ಜಗದೇಕಮಲ್ಲದೇವ ವರ್ಷದ ಸಾಸಿರದೆಪ್ಪತ್ತನೆಯ ಪ್ರಭವ ಸಂವತ್ಸರದ ಪೌಷ್ಯಮಾಸದ
ಮಾವಾಸೆಉ

21 ತ್ತರಾಯಣ ಸಂಕ್ರಮಣ ವ್ಯತೀಪಾತ ಸೋಮವಾರದಂದು ಬಲಕೆಜೆಯ ಮೊದಲೇರಿಯ ಕೆಳಗೆ ಸಾಯಿರಮರದ

22 ಅಡಕೆಯತೋಟದ ಸಹಿತ ನೆಲನಂ ಧಾರಾಪೂರ್ವಕದಿನಿತ್ತನುದಾರತೆಯಿಂ

ಮಂಗಳಮಹಾ ಶ್ರೀ ಶ್ರೀ ಶ್ರೀ

## 80

### ಅದೇ ಏಮನೂರು ಪರಮೇಶ್ವರ ದೇವಾಲಯದ ಬಳಿ ವೀರಗಲ್ಲು.

ಪ್ರಮಾಣ 3′—6″×2′—9″

1 ಓಂ ನಮಃ ಶಿವಾಯ ಸ್ವಸ್ತಿ ಶ್ರೀಮತು ಕಳಚುರ್ಯ್ಯ
2 ಭುಜ ಬಳ ಚಕ್ರವರ್ತ್ತಿ ರಾಯ ಮುರಾರಿ ಸೋ
3 ವಿದೇವ ವರ್ಷದ ೧೮ನೆಯ ದುಂದುಭಿ ಸಂವತ್ಸರ
4 ಆಶ್ವೀಜ ಬಹುಳ ೧೩ ಆದಿವಾರ ದಂದು
5 ಎಂಣೆಗೇರಿಯ ಹರುವ ಬವ್ಮಿ
6 ಸೆಟ್ಟಿಯ ಮಗಂ ಸೋವಿಸೆಟ್ಟಿ ಯಾವೂರ
7 ತುರು ಹುಯಿಲೊಳು ಕಾದಿಪಲರಂ ಕೊಂದು
8 ಸತ್ತು ಸುರಗಣಿಕೆಯರೊಳ್ಕೂಡಿದಂ ಆತ
9 ನ ತಮ್ಮಂ......ಕಲ್ಲ ನಿಲಿಸಿದಂ ಮಂಗಳಮಹಾಶ್ರೀ

## 81

### ಅದೇ ದೇವಾಲಯದ ಬಳಿ ನಟ್ಟ ವೀರಗಲ್ಲು.

1 ಓಂ ನಮಃ ಶಿವಾಭ್ಯಾಂ ಸಾನು ಚರಾಭ್ಯಾಂ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋ
2 ಕ್ಯ ನಗರಾ ರಂಭ ಮೂಲಸ್ತಂಭಾಯ ಶಂಭವೇ ॥ ಶ್ರೀಮತ್ಕಳಚುರ್ಯ ನಿಜಭುಜಬಳ ತ್ರಿಭುವನ ಮಲ್ಲ
3 ದೇವವರ್ಷದ ೧೧ನೆಯ ವ್ಯಯಸಂವತ್ಸರದ ಚೈತ್ರ ಬ ಆದಿವಾರದಂದು ಗಿಣ್ಣಲಗುಂಡಿಯ
4 ಕೋಟೆಯುಂ ಗುತ್ತಿಮಂಡಳಿಕ ಬಮ್ಮರಸನುಂ ವೀರರಸನುಂ ಮುತ್ತಿಕಾದಿದಲ್ಲಿ ಹೊಯ್ಸಣ ಮಂಡ
5 ಳಿಕ ಬಲ್ಪಂಗೆ ಹೋಗದಿರಲು ಪಾಯದಿಂ ಹೊಱವಣ್ಣಿಸಿದ ಸಮಯದೊಳು । ಶಂಭವೇ ನಮಃ
6 ಪರಹಿತ ಚರಿತಂ ಚಲತ ಪರೋಪಕಾರಾರ್ತ್ಥ ಮೀಶ್ವರ ಪದಾಂಬುರುಹೈಕ ಭೃಂಗನೆನ
7 ಲಾದ್ದೊರೆಯಾದಕ್ಕೀರ್ತ್ತಿತ ಮಲ್ಲಸೆಟ್ಟಿಯ ಗುಣದೊಳ್ । ಚಂಪಕ । ಕರಿಘಟೆಯನುತ್ತುರಂಗಚಯಮಂ
8 ನರಸದ್ಭಟಕೋಟಿ ಯೂಥಮಂ ಸುರಪತಿ ಹವ್ಯವಾಹನ ಕುಬೇರ ನರವಾಹನವೆನ್ದು ವೈರಿಸಂಗರ ನೆ
9 ವದಿಂದ ದೇವಚಯಮಂ ಕರೆ ದೀವನೆನಲ್ಕೆ ಬಣ್ಣಿ
10 ಸಲ್ಪರಿಣತೆ ವಿದ್ದನಾವನವನೀತಳದೊಳ್ಕಲ ಕೇತ ಮಲ್ಲಸೆಟ್ಟಿಯ....................

## 82

### ಅದೇ ಗ್ರಾಮದಲ್ಲಿರುವ ಸೋಮಣ್ಣನ ವಶದಲ್ಲಿದ್ದ ತಾಮ್ರ ಶಾಸನ

### (2 ಹಲಗೆ ಉಂಗರವಿಲ್ಲ.)

1ನೆಯ ಹಲಗೆ ಮುಂಭಾಗ.

1 ನಿರ್ವಿಘ್ನಮಸ್ತು ನಮಸ್ತುಂಗಶಿರಶ್ಚುಂಬಿ
2 ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ
3 ಮೂಲಸ್ತಂಭಾಯ ಶಂಬವೆ ॥ ಸ್ವಸ್ತಿಶ್ರೀಜಯಾ
4 ಭ್ಯುದಯಾ ನೃಪ ಶಾಲವಾಹನಶಕ ವರು
5 ಷ ೧೭೯೦ನೆಯ ಪ್ರವರ್ತಮಾನ ಸರವ
6 ಧಾರಿನಾಮ ಸಂ॥ ರದ ಮಾಗ ಶು॥ ೭ ಯ
7 ಲು ಶ್ರೀಮತ್ತುರು॥ ನಂದಿನಾಥ ಪುರದ
8 ಗೌಡರು ಬಸವಲಿಂಗಪ್ಪನವರು ಚಲು
9 ಟಿ ಗ್ರಾಮದಲು ಯಿಹ ಹ್ಸೊವಕ್ಕಲು
10 ಸೋಮಪ್ಪನವರಾ ಅಧಿದೇವತೆ ಯಾದ
11 ಪರಸಿವಮೂರ್ತ್ತಿ ಸದ್ಧರ್ಮಸ್ವರೂಪ
12 ನಾದ ಶ್ರೀಕೊಟ್ಟೂರ ಬಸವೇಶ್ವರನ ಗ
13 ದಿಗೆ ದೀಪಾರಾಧನೆ ಬಗ್ಯೆ ಬರ್ಸಿಕೊಟ್ಟ
14 ಭೂದಾನ ಪಟ್ಟೆಕ್ರಮ ವೆಂತೆಂದರೆ ನಂ
15 ಮ ಗೌಡುಂಮ್ಮಳಿ ಸ್ವಾಸ್ತಿ ಭೂಮಿಯಲ್ಲು
16 ಗಂದರಗಾನಿ ಗದೆ ಬ| ೧ ದರವಳಗೆ ಯಿ
17 ಮ್ಮಾನದ ಗದೆ ಯಿದಕ್ಕೆ ಸಲುವ ಮನೆ ದ
18 ಳ ಹಿತ್ತಲು ತಿಪ್ಪೆಗುಂಡೆ ಹಕ್ಕಲು ಸಹ
19 ವಾಗಿ ಸಿಲಾಸ್ಥಾಪನೆ ಮಾಡಿಸಿಕೊಟ್ಟು ಯಿಧೇವೆ
20 ಯಿ ಭೂಮಿಯಲು ಯಿದಂಥ ನಿಧಿನಿಕ್ಷೇ
21 ಪ ಯೇನುಂಟಾದ್ದಂನ್ನು ಅನುಭವಿಸಿಕೊಂಡು
22 ಬಾಹದೆಂದು ನಂಮ್ಮ ಪುತ್ರ ಮಿತ್ರ ಜ್ಞಾತಿ
23 ಬಾಂಧವರು ಯಿವಾದಿಗುರು ಸಹೋದರ
24 ರು ಮುಂತಾದವರ ಅನುಮತಿಯಿಂ
25 ದ ಬರಸಿಕೊಟ ಭೂದಾನ ಪಟ ನಿಮಗೆ
26 ಜಲಸ್ಥಾಪನೆ ಮಾಡ್ಸಿ ಇದೇವೆ ನಿಮ್ಮ ಸಂ
27 ತಾನಪಾರಂಪರ್ಯೆಯಾಗಿ ಆ ಚಂದ್ರಾ
28 ರ್ಕ ಸ್ಥಾಯಿಗಳಾಗಿ ಅನುಭವಿ
29 ಸಿ ಕೊಂಡು ಬಹದಂ
30 ದು ಬರ್ಸಿ

(ಇದೇ ಹಲಗೆಯ ಹಿಂಭಾಗದಲ್ಲಿ ಬೇರೆ ಶಾಸನ ಬರೆದಿರುತ್ತದೆ.)

(2ನೆಯ ಹಲಗೆ ಮುಂಭಾಗ.)

31 ಕೊಟಭೂದಾನ ಪಟಯಿದಕ್ಕೆ ಯಿವ
32 ರುಶದಾರಭ್ಯಾ ಆರರ ಆಳವಿಲು ಗು ॥೨॥
33 ವಿರೋಧಿ ಸಂ। ರಕ್ಕೆರ್ ೧ । ಯಿ ಪ್ರಮಾಣದ
34 ಲು ಚಡ ಅಳತಿಲ ಅರುವರುಷ ದೊಡ
35 ಅಂತು ಅಳತೆ ತುಂಬಿದ ವ್ಯೈಚೆರು ।ರ
36 ವಿಗೆ ಗ ॥ ಮೂರು ಹೊಂನ ತೆತ್ತುಕೊಂಡು
37 ಬರುವುದು ಯೆಂದು ಬರಸಿಕೊಟ ಭೂ
38 ದಾನ ಪಟ ೧ ಶ್ಲೋಕ ಸ್ವದತ್ತಾದ್ವಿ
39 ಗುಣಂಪುಣ್ಯಂ ಪರದತ್ತಾನುಪಾಲ
40 ನಂ ಪರದತ್ತಾಪಹಾರೇಣ ಸ್ವ
41 ದತ್ತಂ ನಿಸ್ಪಲಂ ಭವೇತ್ತು
42 ಯಿದಕ್ಕೆ ಸಾಕ್ಷಿ
43 ತೋರಿ ಕೆಂಚಣ್ಣನಸಾಕ್ಷಿ
44 ಮೆಣಸಿನ ಹಾಳ ಸಿಂಗಯನಸಾಕ್ಷಿ
45 ಬೈರನಹಳ್ಳಿ ಗಿರಿಯಪ್ಪನ ಸಾಕ್ಷಿ
46 ಕಂಮಾರ ವೀರಣ್ಣನ ಸಾಕ್ಷಿ
47 ಯಿಂತಿವರ ಸನ್ಮತದಿಂದ ಬರದಾ
48 ತ ಶಾನಭೋಗರ ಮುತ್ತಲ್ಲಿಕ ನ
49 ರ ಸಪ್ಪನ ಸ್ವದಸ್ತೊರ ಬರಹ
50 ಬಸವಲಿಂಗಯ ದೇವರ ಸ್ವಹಸ್ತ ದಿ
51 ಂದಾ ಬರಕೊಟ್ಟ ಭೂದಾನವಪಿತ

## 83

ಅದೇ ಹಿರೇ ಚವುಟಿ ಸೋಮಣ್ಣನಲ್ಲಿದ್ದ ತಾಮ್ರ ಶಾಸನದ ೧ನೆಯ ಪತ್ರದ ಹಿಂಭಾಗದಲ್ಲಿ ಬರೆದಿರುವ ಮತ್ತೊಂದು ಶಾಸನ.

1 ರಾ । ಕೊಟ್ಟೂರ ಬಸವೇಸ್ವರ ದೇವರಿಗೆ
2 ದೀಪಾರಾಧನೆಗೆ ಕೊಟ್ಟುದು ಯಿ ದೇವರ
3 ಪುತ್ರ ಸಂತಾನರಾದ ಚಿ । ಸೋಮಪ್ಪನ ವ
4 ರಿಗೆ ಕೈಯಲ್ಲು ಸರ್ವಧಾರಿ ನಾಮ
5 ಸಂ ॥ ರದ ಮಾಗ ಬ ೧೩ ಗುರುವಾರ
6 ದಲ್ಲು ರಾ। ನಾಡಿಗರು ಕಾಳಪ್ಪನ ವ
7 ರು ರಾ । ದೇಶಾಯಿಭಿಷ್ಟಪ್ಪನ ವ
8 ರು ಪುರದ ಗೌಡರು ಬಸವಲಿಂ
9 ಗಯ್ಯನವರು ನಾ ಉನಂಮ ಉಂ
10 ಬಳಿ ಭೂಮಿವೊಳಗೆ ಗಂದ ಕೊನಿ
11 ಹೊಲ ಹಕ್ಕಲ್ಲು ಮನಿಗೆ ಸಹ ನಾ ಉ
12 ಯಲ್ಲವರು ಕುಶಲದಿಂದಸ್ತಿರಸ್ತಾ
13 ಮಾಡಿ ಕಲ್ಲನಡಿಸಿ ಕೊಟ್ಟಿಥೇವೆ ಮೇ
14 ಲಾಗಿ ಯಿ ಭೂಮಿಗೆ ಜೋಡಿ ಗಂ ॥೨॥೦
15 ಪ್ರಮಾಣದಲ್ಲು ಉರಂತತಕ್ಕೆ ಅಳ
16 ವಿ ೬ ಪ್ರಮಾಣದಲ್ಲು ಮಾಡಿದಲ್ಲು ಯಿ ಹೊ
17 ಲಕ್ಕೆ ಅಳವಿತುಂಬ ತನಕ ಗಂ ॥೨॥೦
18 ಪ್ರಮಾಣದಲ್ಲು ಮುಂದೆ ಪಟ್ಟ ಪಳಿಗೆಯೇ
19 ನು ಯಿಲ್ಲವೆಂದು ಬರಕೊಟ್ಟದು ಬಲ್ಲಗಿ
20 ಮುಂದೆ ಅಳವಿ ತುಂಬಿದ ಹಿಡೆಮುಂದೆ
21 ಜೋಡಿ ಗ॥ ೨ ॥ ಪಟ್ಟಿಗಂ ॥೨॥೦ ಅಂ
22 ತು ಗ ೧ ॥ ೦

(೨ನೆಯ ಪತ್ರದ ಹಿಂಭಾಗ)

23 ಅಕ್ಷರದಲ್ಲು ಮೂರು ಹೊಂನನುಯಿ
24 ಪ್ರಮಾಣದಲ್ಲು ಮುಂದೆ ಯಾವುದು
25 ಯೇನಯಿಲ್ಲ ವೆಂದು ಯಿ ಪ್ರಮಾಣ
26 ಮುಂದೆ ತೆತ್ತುಕೊಂಡು ಸುಖದಲ್ಲಿ ಬದ
27 ಕಮಾಡಿಕೊಂಡು ಯಿಹೊದೆಂದು
28 ಬರಕೊಟ್ಟ ಕ್ಕಲ್ಲ ಕಗದಲು ಯಿದಕೆ
29 ಸಾಕ್ಷಿ ತೊರಿ ಕೆಂಚಂಣನ ಸಾಕ್ಷಿ ಚಿತ್ತನ
30 ಹಳಗಿ ಗಿರಿಯಂಣನ ಸಾ
31 ಕ್ಷಿ ೧ ಮೆಣಸಿನಹಾಳ ನಿಂಗ
32 ಣನ ಸಾಕ್ಷಿ ೧ ಕಮ್ಮರ ವೀರಂಣ
33 ನ ಸಾಕ್ಷಿ ೧ ಯಿಂತಿವರ ಸನ್ಮ
34 ತದಿಂದ ಬರದಾತ ಸೊನ ಕಲ್ಲ
35 ವರಸಿವಯುನ ಸುಹಸ್ತ ಬರ
36 ಹಉ ಬಸವಲಿಂಗದೇವರು ವ
37 ಪಿತ್ತ ॥

## 84

ಅದೇ ಗ್ರಾಮದ ಈಶ್ವರ ದೇವಾಲಯಕ್ಕೆ ಬಲಭಾಗ ಹಿತ್ತಲಿನಲ್ಲಿ ಬಿದ್ದಿರುವ ಕಲ್ಲು

ಪ್ರಮಾಣ 3′—6″×1′—6″

1 ಕರಸಂವತ್ಸರ ಜ್ಯೇಷ್ಟ ಬ
2 ಹು ೧ ಆದಿವಾರದಲೂ ಕಂ
3 ದಳಿಯ ಹೊಂಗಗೌಡನಾಬಿಡಿ
4 ದೇಸಿಗಾವುಂಡನ ಆಳು ಯು
5 ದ್ಧದಲು ಶಿವರೋಕಕೆ ಸಂದ
6 ........ ವೀರ ಬಾಂಧವ

## 85

ಅದೇ ಗ್ರಾಮಕ್ಕೆ ಸೇರಿದ ತೋಟದಲ್ಲಿ ಮದಾರ್‌ಸಾಬರ ಮನೆಯ ಬಳಿ ಬಿದ್ದಿರುವ ಕಲ್ಲು.

ಪ್ರಮಾಣ 3′—6″×1′—3″

1 ಶ್ರೀ ಶಿವಯನಮ ನಮಸತುಂ
2 ಗ ಶಿರ ಚುಂಬಿ ಚಂದ್ರಚಾಮರ
3 ಚಾರವೇತ್ರಯಿಲೋಕ್ಯ ನಗರಾ ರಂಭಾ
4 ಮೂಲಸ್ತಂಬಾ ಯ ಸ್ವಯಂಭುವೇ ಶು
5 ಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಸಲವಾ
6 ಹನ ಶಖ ವರುಷ ೧೬೪೬ ನೆ ಕ್ರೋಧಿ
7 ಶ್ರಾವಣ ಬಹುಳ ಪಂಚಮಿ ಸೋಮ··
8 ದಂದುಗುತ್ತಳದ ಮಾಣಿಕಕಾಳಗ

9 ಉಡರಾ ಲಿಂಗಪ ಗೌಡರು ಸಮರ್ಪಿ
10 ಸಿದ ಉಂಬಳಿಂ ॥ ☰ ಹೊಲನು ಮ
11 ದಪಗಉಡರು ಊಳಿಗದ ನಮು
12 ······ಕೆಂಚಪಗೆ ದಯ
13 ಪಾಲಿಸಿದ್ರು··········

## 86

ಅದೇ ಗ್ರಾಮದಲ್ಲಿರುವ ಸೋಮಣ್ಣನ ಹಿತ್ತಲಿನಲ್ಲಿ ಹುಣಸೇಮರದ ಕೆಳಗೆ ಬಿದ್ದಿರುವ ಕಲ್ಲು.

ಪ್ರಮಾಣ 3′—0″×2′—6″

1 ನಮೋವೀತರಾಗಾಯ । ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾ ಮೋಘಲಾಂ
2 ಛನಂಜೀಯಾತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ । ಸಾಗರ ವಾರಿವೇಷ್ಟಿತ ಸಮಸ್ತ
3 ಧರಾರಮಣೀಘನಸ್ತನಾಭೋಗವಿದೆಂಬಿನಂ ವಿದಿತ ವಿಸ್ತೃತ ಸಾರತರಾ ಗ್ರಹಾರದಿಂ
4 ನಾಗರಖಂಡ ಪತ್ರ ಪರಿವೇಷ್ಟನದಿಂ ಜನನೇತ್ರ ಪುತ್ರಿಕಾ ರಾಗ ಮನಿತ್ತು ಮಾಣ್ದುದೆಮನಸ್ಸು
5 ಖದಂಬನವಾಸಿಮಂಡಳಂ । ನಾಗರಖಂಡಂ ಬನವಾಸೆ ಗಾಗಿಕ್ಕರ್ಮ್ಮಂ ಭೂಷಣಂ ಬೊಲು
6 · ····· ಗಿರೆ ····· ಬಾಗಿವೆುಜೆಗುಂ ನಾಗಲತಾ ಪೂಗವನದಿ ನೆಸೆವ ತವೆಸೊಂ
7 ······· ನಾಗರ ಖಂಡ ····· ಸಾಗರಮಾಗೆ ತೋರ್ಪ್ಪ
8 ······· ಸುಖಕಿಂಬಾಗಿ····· ಗೆವೆುಜೆವುದೀ ··········ನನುಜನಾ ಸೇಣಿಸೆಟ್ಟಿ
9 ·······ಬಸದಿಯು ಮಾಡಿಸಿದರು ಯಿಂತಣ್ಣ ತಮ್ಮಂದಿರಿಬ್ಬರು ಶಾಂತಿ ಜಿನೇಸ್ವರ
10 ಬಸದಿಯಂ ಮಾಡಿಸಿ ಸಂತೋಷದಿಂ ·······ಸಂತಸದಿಂ ಪಡೆದರ್ದ್ದರಾ ಚಂದ್ರ ····· ಗುಣವಾರ್ಧಿಯ ····· ಪಡೆದು ಬಾಳುತ್ತಿರೆ ಪಲಕಾಲಂ ಪುರುಷನಿಧಿನಾಗ
11 ಸೆಟ್ಟಿ ತಂನಸು ಪೆಂಪಿಂದೆಸೆವಳ್ಗರಸಿ ಯಕ್ಕನು ಮತಮತಂ·····ಪಡೆದು ಸುಖದಿಂ ಬಾಳ್ವುದು । ಸ್ವಸ್ತಿ ಶ್ರೀಮನ್ಮಹಾ ಮಂಡಲೇಶ್ವರ ಅರಿರಾಯ
12 ವಿಭಾಡ ಅಗಳಿ ······· ಭಾಷೆಗೆ ತಪ್ಪುವರಾಯರ ಗಂಡಚತುಸ್ಸಮು
13 ದ್ರಾಧಿ ಪತಿ ಶ್ರೀವೀರಬುಕ್ಕರಾಯ ಮಹಾರಾಯರು ರಾಜ್ಯಂಗೆಯ್ಯುತ್ತುಮಿ ······· ವಿ
14 ರೋಧಿ ಸಂವತ್ಸರ ಕಾರ್ತಿಕ ಶುದ್ಧ ತದಿಗೆ ······· ಪರದೇವರ ನಿ
15 ······· ಚಂದ್ರ ಗುಡ್ಡಿಗಳು ಮಪ್ಪ·······ಶಾಂತಿನಾ
16 ಥದೇವರ ಅಮೃತ ಪಡಿ ನಂದಾದೀಪ ··········
17 ಕೆಜೆಯ ಕೆಳಗೆ ಗದ್ದೆ ಖ—ಳ ········ ಈ ಧರ್ಮ್ಮಮಂ ಪ್ರತಿಪಾಲಿಸು
18 ·····································
19 ವಾರಣಾಸಿ ಕುರು ಕ್ಷೇತ್ರ ··················
20 ··············· ಕವಿಲೆಯ ····················
21 ·············ಪಾತಕನಕ್ಕು····· ಶ್ರೀ ಶಾಂತಿನಾಥ·····

## 87

ಅದೇ ಗ್ರಾಮದ ಹಳೇವೂರು ನಿವೇಶನದಲ್ಲಿ ದ್ಯಾಮವ್ವನ ಗುಡಿ ಬಳಿ ನಟ್ಟ ಕಲ್ಲು.

ಪ್ರಮಾಣ 4′—0″ · 2′—9″

1 ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೇ ತ್ರೈಲೋಕ್ಯ
2 ನಗರಾ ರಂಭಾ ಮೂಲಸ್ತಂಭಾಯ ಶ್ವಯಂಭುವೇ [ಶಂಭವೇ] ಸ್ವಸ್ತಿ ಶ್ರೀ
3 ಸಾಲವಾಹನ ಶಕ ವರುಷ ೧೬೩೪ನೆಯ ದುರ್ಮುಖಿ ಸಂ
4 ವತ್ಸರ ಅಸ್ವೀಜ ಸು ೧ ಲ್ಲು ಶ್ರೀಮತು ದೇಸಾಯಿಗುತ್ತಳ
5 ದಹನುಮಂತ ಗೌಡರು ಸುಖದಿಂದ ರಾಜ್ಯವ
6 ನಾಳುತ್ತಿರಲು ೧೬೩೭ನೆಯ ತಾರಣ ಸಂ॥ ಚೈತ್ರ ಬ
7 ೫ ಲು ಬರಸಿದ ನಿರೂಪ । ಹುರಳಿ ಪಟ್ಟಣದ ಸೀಮೆವ
8 ಳಗಣ ಹಿರಿಯ ಚವುಟಿಯ ಚೆಂನ ಬಸವ ಗೌಡರ ಮಗ
9 ವೀರಪ ಗೌಡರಿಗೆ ಕುದುರೆ ದಾಣಿತರುವ ಭೂಮಿವಳಗೆ ಪಾಲಿಸಿ ಕೊಂಡದ್ದು ಗ ೩
10 ವರಹ ಯಿದಕ್ಕೆ ಸ್ಥಳ ······· ಮೇಲಣ ಹೊಲ ॥ ೦೨ ·······
·····························

## 88

ಅದೇ ಗ್ರಾಮದೊಳಗೆ ಹನುಮಂತ ದೇವರ ಗುಡಿಯ ಮುಂದೆ ನಟ್ಟ ಮಾಸ್ತೀ ಕಲ್ಲು.

ಪ್ರಮಾಣ 6′—0″×1′—3″

1 ಸ್ವಸ್ತಿ ಶ್ರೀಮನ್ಮಹಾ ಮಂಡಲೇ
2 ಸ್ವರ ರಾಜಾಧಿ ರಾಜ ರಾಜ ಪರಮೇ
3 ಸ್ವರ ಹರಿಹರ ರಾಯನ ರಾಜ್ಯೋದಯ
4 ದ ಶಕ ೧೩೩೧ನೆಯ ಕ್ಷಯ ಸಂವ

5 ತ್ಸರದ ವೈಸಾಕ ಸು ೮ ಸೋ ಶ್ರೀಮತು
6 ಶ್ರೀವಡ್ಡವ್ಯವಹಾರಿಬಮ್ಮಿ ಸೆಟ್ಟಿಯ ಮ
7 ಗ ಪೋಚಿ ದೇವನು ಕೇತಮಲ್ಲ
8 ಕುಂತಳ ದೇಶದ ಗಲುಡಿ ನಾಡ ತವುಟಿ
9 ಯ ಮೇಲೆ ಬಂದು ಹೆಂಡಿರುಡೆ
10 ............. ವಾಗಕಾದಿಸತ್ತೊಡೆ ಆತನ ಸತಿ
11 ......... ಮಹಾಸತಿಯಾದಳು
12 ಶ್ರೀಮತು ಬಮ್ಮ ಗೌಡನ ಮಗ
13 ಮಾದ .... ಗ ಉಡಮಾಡಿಸಿದ
14 ಮದವಳಿಗೆ ಕಲು ನೆಡಿಸಿದು ಮಂಗಳ
15 ಮಹಾಶ್ರೀ ಶ್ರೀ

ವಿಜಯ

## 89

ಅದೇ ಚಿಕ್ಕಚವುಟಿ ಗ್ರಾಮಕ್ಕೆ ೧ ಮೈಲಿ ದೂರದಲ್ಲಿ ಗೌಡರಗದ್ದೆಯಲ್ಲಿ ನಟ್ಟಿರುವ ಕಲ್ಲು.

ಪ್ರಮಾಣ 2′—6″×1′—3″

1 ವಿರೋಧಿಕೃತು ಸಂ ವೈಶಾ
2 ಕ ಬ ೧ ಶ್ರೀಮತು ಚ್ಕಿ ಚವು
3 ಟಿಗ ಉಡ ಬಸಪ್ಪಗೆ ದೇಶಾಯಿ
4 ಗುತ್ತಳಲ ಚಪಗಉಡರು ಬರಸಿ
5 ಳುಹಿಸಿದ ವಿನಿಯಾರ್ಥ ಅದಾಗಿ ಚ
6 ವುಟಿ ಕೊಂಬಲ್ಲಿಗ ದಳವಾಗಿದಾಗ
7 ನೀನು ನಮ್ಮಮಕ್ಕಳ ಮರಿಯಾಗಿ ಕಾ
8 ದು ಕಟಿಕೊಂಡಿದ್ದ ಕಾರಣ ನಿಂನ
9 ಮೇಲಣ ದಯದಿಂದ ಚಿಕ್ಕಚವುಟಿಲಿ
10 ಸತ್ತಿಗೆಮಾನ್ಯಾ ಅಯಿದು ವರಹಾ
11 ನ ಹೊಲನ ಪಾಲಿಸಿ ಕೊಟ್ಟವಾಗಿ
12 ನೀನು ನಿಂನ ಮಕ್ಕಳ ಮಕ್ಕಳಪಾರಂ
13 ಪರಿ ಯಾ ಅನುಭವಿಸಿಕೊಂಡು ಬರು
14 ವುದು ಶ್ರೀ ಶ್ರೀ ॥

## 90

ಅದೇಹೋಬಳಿ ಎಣ್ಣಿಕೊಪ್ಪಗ್ರಾಮದ ಸರ್ಕಾರಿ ವೋಣಿಯಲ್ಲಿ ನಟ್ಟಕಲ್ಲು.

ಪ್ರಮಾಣ 2′—9″×1′—9″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮ
2 ರ ಚಾರವೇ ತ್ರೈಲೋಕ್ಯ ನಗರಾರಂಭ ಮೂ
3 ಲಸ್ತಂಭಾಯ ಶಂಭವೇ। ಸ್ವಸ್ತಿಶ್ರೀ ಜಯಾಭ್ಯು
4 ದಯ ನೃಪಶಾಲ್ಲಿವಾಹನ ಶಖ ವ
5 ರುಶ ೧೬೦೮ಲನೆಯ ಪಾರ್ಥಿ
6 ವ ಸಂವತ್ಸರದ ಜ್ಯೇಷ್ಠ ಶು ಲ್ಲು
7 ಶ್ರೀಮತು ದೇಸಾಯಿ ಗುತ್ತಳದ
8 ಹನುಮಂತ ಗೌಡರು ಸುಖದಿಂದ
9 ರಾಜ್ಯವನಾಳುತ್ತಿರಲು ತಾರಣಸಂವತ್ಸರ
10 ದ ಪುಶ್ಯ ಬ ೬ ಲ್ಲು ನಿರೂಪ ಹುರುಳಿ ಪೊ
11 ಟ್ನದ ಸೀಮೆ ವೊಳಗಣ ಕೊಪದ ಮರಿ ಬಸಪಗೌಡ
12 ರಿಗೆ ಕುದುರೆ ದಾಣಿಬಗೆ ತರುವ ಭೂಮಿವಳ
13 ಗೆ ಪಾಲಸಿಕೊಂಡದು ಗ ೩ ಮೂರುವರ
14 ಹ ಯಿದಕ್ಕೆ ಸ್ಥಳ ಕಲ್ಲುಮಟ್ಟಿ ಹೊಲ ಬೀಜ
15 ವರಿ ಖ ॥ ೨ ॥

## 91

ಅದೇ ಗ್ರಾಮದ ಮಲ್ಲಿಕಾರ್ಜುನ ಗವುಡರ ಹಿತ್ತಲಿನಲ್ಲಿ ನಟ್ಟ ಕಲ್ಲು.

1 ಸ್ವಸ್ತಿಶ್ರೀ ಸುಕ್ಲ ಸಂವತ್ಸರದ
2 ಮಾರ್ಗಶಿರ ಸುದ್ಧ ೧೩ ಲು ಸಾಮನ್ತಾ
3 ಧಿಪತಿ ಬಮ್ಮಯ ನಾಯಕರು ಪರಿಸೆ
4 ಯಮೇಲೆ ಬಂದಾಗ ದೇವಯನ ಮಗ
5 ಹರಗಾವುಣ್ಡ ಪಲರ ನಿಱಿದು..............
6 ಸುರಸತಿಯ.........................
7 .........ಕುಯಿದರು................
8 .........ಯನ:.................

## 92

ಅದೇ ಮಲ್ಲಿಕಾರ್ಜುನ ಗವುಡರ ಹಿತ್ತಲಿನಲ್ಲಿ ನಟ್ಟ ೨ನೆಯ ಕಲ್ಲು.

ಪ್ರಮಾಣ 1′—6″×1′—2″

1 ಸ್ವಸ್ತಿ ಶ್ರೀ ಸಿದ್ಧೇಶ್ವರ ದೇವರ ಕೆಯ್ಗೆ ಅನ್ಯಾ
2 ಯವಂ ಚಿನ್ತಿಸಿದಂಗೆ ಗಂಗೆಯುಲು
3 ಸಾಯಿರ ಕವಿಲೆಯುಂ ಮಂಬ್ರಾ
4 ಹ್ಮಣರುಮಂ ಕೊನ್ದ ಪಂಚಮಹಾ
5 ಪಾಪದ ಲೋಕಕ್ಕೆ....................
6 .........ಹೋಹರು..........

## 93

ಅದೇಹೋ॥ ಕಮ್ಮನಹಳ್ಳಿ ಗ್ರಾಮದಲ್ಲಿ ಹುಣಸೇಮರದ ಬುಡದಲ್ಲಿ ನಟ್ಟಿರುವ ಕಲ್ಲು.

ಪ್ರಮಾಣ 5′—6″×2′—6″

1 ಶ್ರೀಮತ್ಪರಮಗಂಭೀರಸ್ಯಾ ದ್ವಾದಾಮೋಘಲಾಂಛನಂ
ಜೀಯಾತ್ತ್ರೈಳೋಕ್ಯ ನಾಥಸ್ಯ ಶಾಸನಂ ಜಿ.....................................

2 ..........ಶ್ರೀಮತಿ ಮೂಲಸಂಘ..........ಸಂಘೋದ್ಭವೇ
..................ಶುಭೇದೇಶೇ ಗಣೇ
3 ..................ಸ್ಯಾದ್ವಾದಾರಿ ನಗಾಶನಿ..............ಕೈವಲ್ಯ
ಜನ್ಮಾವನಿಃ
4 ..........ಧಯಚಂದ್ರ ಕರುಣಾ.............................
ಕಲಿಯುಗೇ.............................................
5 ..................ಬುಳ್ಳಪ.........ಶೋಭತೇ.............
..................................
6 ..........ಜಿನಪದ ಸೇವೆಯೊಳುಚಿತ ದಾನದೊಳು........................
7 ಜಿನೇಸ್ವರನಾಮ..............ಮನದೊಳ..........................
..............ಬುಳ್ಳಪಂ................
8 ..........ಪ್ರಭವ ಸಂವತ್ಸರ..........................
..........ದೇವಾಲ
9 ಮಾಡಿಸಿ..................ಹಾರದಾನಕ್ಕಂ

(ಸವೆದಿದೆ) (ಮುಂದೆ ಕಾಣುವುದಿಲ್ಲ)

## 94

ಅದೇ ಆನೆವಟ್ಟಿ ಹೋ। ಕಮ್ಮನಹಳ್ಳಿ ಗ್ರಾಮದ ಈಶ್ವರ ದೇವಾಲಯದ ಮುಂದೆ ನಟ್ಟ ೧ನೆಯ ಕಲ್ಲು.

ಪ್ರಮಾಣ 3′–0″×1′–6″

1 ಸ್ವಸ್ತಿಶ್ರೀಮತು ವೀರಬಲ್ಲಾಳದೇವ
2 ವರ್ಷದ ಕ್ರೋಧನ ಸಂವತ್ಸರದ ಚೈ
3 ತ್ರ ಸು ೧೦ ಬ್ರಿಹವಾರದಂದು ಶ್ರೀ
4 ಮತು ......ಬೇಡರ......ಗವುಡ......
5 ಬೀರಮಗ ಉಡಿ ಮಹಾಸತಿಯಾ
6 ದಳು......ಮಂಗಳ ಶ್ರೀ ಶ್ರೀ

## 95

ಅದೇ ಈಶ್ವರದೇವಾಲಯದ ಮುಂದೆ ನಟ್ಟ ೨ನೆಯ ಕಲ್ಲು.

ಪ್ರಮಾಣ 3′–0″×1′–6″

1 ಸ್ವಸ್ತಿ ಶುಕ್ಲಸಂವತ್ಸರದಂದು ಸೇನಕುಳತಿಳಕ
2 .......... ನಾಳ್ಪ್ರಭು........ಯೇಚಗವುಂಡ
3 ...... ಕಳ್ಳರು ಕೊಂಬಾಗ ಕಳ್ಳರ ನಿಱಿದು
4 ಸ್ವರ್ಗಕೆ ಸಂದ ಆತನ ಮದವಳಿಗೆ........

## 96

ಅದೇ ಹೋ॥ ಕುಣಿಕೆಪ್ಪರ ಕಾನಿನಲ್ಲಿ ಪಾಳುಭಾವಿಬಳಿ ಬಿದ್ದಿರುವ ತುಂಡುಕಲ್ಲು.

ಪ್ರಮಾಣ 2′–9″×1′–6″

1 ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡ
2 ಳೇಶ್ವರ ಬನವಾಸೆ ಪುರವರಾಧೀಶ್ವರ........
3 ..... ..ಮಧುಕೇಸ್ವರದೇವ ಪಾದಾರಾಧಕ ಶ್ರೀಮತು
4 ರೇಚದೇವ........ಆಳು........
5 ........ಹಲಬರಕೊಂದು ತುಱುವಂ ಮಗುಳ್ಚಿ......ಮಾರ್ವ್ವಲ
6 ವಂ ತಳ್ತಿಱಿದು ಮೆಱೆದು ಸುರಲೋಕಪ್ರಾಪ್ತನಾದ ಆತನ
7 ಮಕ್ಕಳು ದೊಮ್ಮಯ್ಯ ಕಲ್ಲಯ್ಯಂಗಳು ಕಲ್ಲ ನಿಲಿಸಿದರು ಮಂಗಳ
8 ಮಹಾ ಶ್ರೀ ಶ್ರೀ

## 97

ಅದೇ ಹೋ॥ ಹಂಚಿಗ್ರಾಮದ ಹನುಮಂತ ದೇವಾಲಯದ ಕೆರೆವೊಳಗೆ ಬಿದ್ದಿರುವಕಲ್ಲು.

ಪ್ರಮಾಣ 2′–6″×1′–3″

1 ಸ್ವಸ್ತಿಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪ
2 ರಮಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರ

3 ಣ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯವ ೬
4 ತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನ ಮಾಚಂದ್ರಾ·········
5 ಬರಂ ಸಲುತ್ತುಮಿರೆ······ಗೆಱೆಯ ಶ್ರೀಮತು
6 ಪೆಗ್ಗ್ಗಡೆ ಬೊಪ್ಪದೇವಂ ಹಂಚಿಯ ಮುತ್ತಿಕಾದುತ್ತಿ
7 ರಲು······ರಾಮಿಸೆಟ್ಟಿ······ಬಂದುಕಾದಿ
8 ಪಲರಂಕೊಂದು ಸುರಲೋಕಕೆ ಸಂದಂ ಜಿತೇನ
9 ಲಭ್ಯತೇ······ಸುರಾಂಗನಾ··········
10 ಕಾಯೇಕಾಚಿನ್ತಾಮರಣೇರಣೇ ‖

## 98

ಅದೇ ಹಂಚಿಗ್ರಾಮದ ಹನುಮಂತ ದೇವಾಲಯದ ಹಿಂಭಾಗದಲ್ಲಿ
ನಿಲ್ಲಿಸಿರುವ ಕಲ್ಲು.

ಪ್ರಮಾಣ 3′–6″×2′–6″

1 ಸ್ವಸ್ತಿಶ್ರೀ ಸತ್ಯಾಶ್ರಯ ಕುಳತಿಳಕ
2 ······ತ್ರಿಭುವನಮಲ್ಲದೇವರ
3 ·········ತಾರಂಬರಂಸ······
4 ··················
5 ಯಮಗಂ ಬೆತ್ತಿಗೆ ಸಿವಯ್ಯಂ ವ್ಯವಹಾರಕೆ ಹೋಹ
6 ಲ್ಲ ಕಡಹದ ದಾರಿಯಲು ಕಳ್ಳರು ಬಂದು
7 ತಾಗೆ ತಳ್ತಿಱಿದು ಸುರಲೋಕಪ್ರಾಪ್ತನಾದ

## 99

ಅದೇ ಹನುಮಂತ ದೇವಾಲಯದ ಮುಂದೆ ನಟ್ಟಕಲ್ಲು.

ಪ್ರಮಾಣ 4′–0″ × 1′–8″

1 ಸ್ವಸ್ತಿಶ್ರೀಮತು ಕಳಚುರಿಯ ಭುಜಬಳ
2 ಚಕ್ರವರ್ತ್ತಿ ತ್ರಿಭುವನಮಲ್ಲ ಬಿಜ್ಜಲದೇವವರಿಷ
3 ದ ೧೧ನೆಯ ವ್ಯಯಸಂವತ್ಸರದ ಆಷಾಢ ಸುದ್ಧ
4 ಚತುರ್ದಶಿ ಮಂಗಳವಾರದಂದು ಹಂಚೆಯ
5 ಬಮ್ಮಿಸೆಟ್ಟಿಯುಮಗಂ ಮದಿಗಹರ್ಯಂ ಮರಸರು
6 ಮುತ್ತಿರಲು ಕಳ್ಳನಾಯಕರುಬಂದು ತಾಗಿದಂದು ನೂಕಿ
7 ಸ್ವಾಮಿ····ವೆಸದಿ ಅಲಗಂಕಿತ್ತಾಳ್ದನ ಕಾದುಕೊಂ
8 ದು ತಳ್ತಿಱಿದು ಸುರಲೋಕಪ್ರಾಪ್ತನಾದ ‖

## 100

ಅದೇ ಹನುಮಂತದೇವರ ಗುಡಿಯ ಎದುರುಭಾಗಕ್ಕೆ
ನಿಲ್ಲಿಸಿರುವ ಕಲ್ಲು.

ಪ್ರಮಾಣ 3′–6″ × 1′ 3″

1 ಪಡಿಯೊಡೆದೊಪ್ಪಂ ತಂನ ಕುದುರೆನೆಲವೂರಿವಿಚ್ಚೆನೆಕ್ಕಟಿ
2 ಬಂದನೆಯ ಮಸದಯೊಡೆಯ ಸೂಜಿಗೊಣ್ಡ
3 ಪುಯ್ಯಲಕೇಳ್ದು ಕಲಸಿಲ್ಲದೆ ಪರಿದು ತಾಗಿದ ಹಂಚೆಯರ್ಜುನನಾಗಳು
4 ಮಲೆದರಿಮಲ್ಲಯುದ್ಧದಲು ಬಾಗುಲ ಗರಗೌಡ
5 ಮಯತಳುದಿಱಿದುಬಿದ್ದ ಮಲ್ಲಯುಂ ನಲನಲದು
6 ಯಿದಚ್ಚರಸಿಯರಾಗಳು‖ ಸ್ವಸ್ತಿಶ್ರೀಮ
7 ಚ್ಚಾಳುಕ್ಯ ವಿಕ್ರಮವರುಶದ ೫ನೆಯ ಪ್ರಜಾಪತಿ ಸಂ
8 ವತ್ಸರದ ಪುಶ್ಯ ಬಹುಳ ದಸಮಿ ಗುರುವಾ
9 ರದಂದು ಸುರಲೋಕ್ಕೆ ಸಾರಿದಂ ‖

## 101

ಅದೇ ಆನೆವಟ್ಟಿ ಹೋ। ಹಿರೇಮಾಗಡಿ ದುರ್ಗಾದೇವಾಲಯದ ಮುಂದೆ ನಟ್ಟಕಲ್ಲು.

ಪ್ರಮಾಣ 9′–3″ × 2′–3″

1 ಸ್ವಸ್ತಿಶ್ರೀಮಚ್ಚಾಳುಕ್ಯ ವಿಕ್ರಮವರಿಷ······
2 ಸಂವತ್ಸರ ಮಾರ್ಗ್ಗಶಿರ······ವಾರದಲು
3 ಮೇರಾಳ··········
4 ಯ ಬೇಡನಾಯಕರು ಗುಡ್ಡಮನೇಱಿಹೋಹಾಗ
5 ಅಂದಿಗೆ ಮಾದಯನಿಱಿಯೆ ಸತ್ತು ಸುರಲೋಕ
6 ······ಶ್ರೀಮತುಗಿರಿ······
7 ······ನಾಚಯಣ······ನಿಲಿಸಿದ ಮಂಗಳಮ
8 ಹಾ ಶ್ರೀ ಶ್ರೀ

## 102

ಅದೇ ಅನೆವಟ್ಟಿ ಹೋ॥ಗಂಗವಳ್ಳಿ ಗ್ರಾಮಕ್ಕೆ ಸುಮಾರು ಅರ್ಧಮೈಲಿ ದೂರದಲ್ಲಿ ಗದ್ದೆಯಬದುವಿನಲ್ಲ.

ಪ್ರಮಾಣ 2′–3″×1′–0″

ಶ್ರೀ

1 ಊರ ಮಹಾಜನರು
2 ಶೋಭಕೃತು ಸಂವ
3 ಚರದ ಮಾಗ ಶು ೫ ಲು
4 ಶ್ರೀ ಆಶ್ವಾಲಾಯನ ಸೂ
5 ತ್ರದ ಕಾಶ್ಯಪಗೋ
6 ತ್ರದ ಮರಿಯಪ ಭ
7 ಟ್ಟರಿಗೆ ಉಂಬಳಿ ಕೊ
8 ಟ್ಟದು ಇದಕೆ ತಪಿದವರು
9 ತಾಯಿಗೆ ತಪಿದವರು ಶ್ರೀ

## 103

ಅದೇ ಗಂಗವಳ್ಳಿಗೆ ದಕ್ಷಿಣ ಕಾನಿನಲ್ಲಿ ಹಾಳುದಾವಿಯಲ್ಲಿ ಬಿದ್ದಿರುವ ಕಲ್ಲು

1 ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥಿವೀವಲ್ಲಭ ಮಹಾ ರಾಜಾಧಿರಾಜ ಪ
2 ರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮ
3 ತ್ರಿಭುವನ ಮಲ್ಲದೇವರ ವಿಜಯ ರಾಜ್ಯ ಮುತ್ತರೋತ್ತರಾಭಿ ವೃದ್ಧಿ ಪ್ರವರ್ದ್ಧಮಾನ
4 ಮಾಚಂದ್ರಾರ್ಕ್ಕ ತಾರಂಬರಂ ಸಲುತ್ತುಮಿರೆ ? ಸ್ವಸ್ತಿ ಯಮನಿಯಮ ಸ್ವಾಧ್ಯಾಯಧ್ಯಾ
5 ನ ಧಾರಣ ಮೌನಾನುಷ್ಠಾನ ಜಪಸಮಾಧಿ ಶೀಲ ಗುಣಸಂಪನ್ನರು। ಚತುರ್ವ್ವೇದ
6 ······· ತಸ ಕಳಶಾಸ್ತ್ರ ಪ್ರವೀಣ ···· ಯಜ್ಞ ದೀಕ್ಷಿತರುಂ ಸತ್ಯ ಶೌ
7 ಚಾಚಾರ ಚಾರಿತ್ರನಿಳಯರುಂ ···· ಯಲೋಭ ದುರ್ಲ್ಲಭರುಂ। ಚತುಸ್ಸಮಯ ಸಮು
8 ದ್ಧರಣರುಂ ಪ್ರಭುಮಂತ್ರೋತ್ಸಾಹ ಶಕ್ತಿ ತ್ರಯ ···ಭೀತರುಂ ಆಶ್ರಿತ ಜನ
9 ··ಭಿವಾಂಛಿತ ಫಳ ಪ್ರದರುಂ। ಶರಣಾಗತ ವಜ್ರಪಂಜರರುಂ ಶ್ರೀಮದನಾದಿಯ ಗ್ರಹಾ
10 ······ನಾಡಜಾಗಳೆಯ ಪ್ರಭುಗಳು ಸಮಸ್ತ ಪ್ರಜೆಗಳು ವಿದ್ವರ್ ಸ್ವಸ್ತಿ ಸ
11 ಮಸ್ತ ಭುವನ ಜನ ವಿಖ್ಯಾತ ಪಂಚ ಸತವೀರ ಶಾಸನ ಲಬ್ಧಾ ನೇಕ ಗುಣಗಣಾಳಂಕ ....ವೀರಬಳಂ
12 ಜುಧರ್ಮ್ಮ ಪ್ರತಿಪಾಳಕರುಂ ···· ಭದ್ರವಂಶೋದ್ಭವರು ಭಗವತೀ ದೇವೀಲಬ್ಧವ
13 ರ ಪ್ರಸಾದರುಂ ·······ಅಯ್ನೂರ್ವ್ವರ್ ಗ್ಗರ್
14 ಶಿವಪಾದ ಸೇಖರ ಪರಬಳ ಸಾದಕತೆಲುಂಗ ವಂಶೋದ್ಭವ ಪ್ರಿಥ್ವೀಶ್ವರನಪ್ಪಬೀಯ ಬಳಿ
15 ಗಾಟಿ ಸೆಟ್ಟಿ ಶ್ರೀ ಮಚ್ಚಾಳುಕ್ಯ ವಿಕ್ರಮ ವರ್ಷದ ೨ನೆಯ ದುಂದುಭಿ ·········
16 ······ ಕಲ್ಲ ಕೊಟ್ಟ ಭೂಮಿ ·············

## 104

ಅದೇ ಹೋಬಳಿ ಗಿಣಿವಾಲ ಗುಡ್ಡದ ಕೆಳಗೆ ಗದ್ದೆಯ ಬಳಿ ಮುತ್ತಗದ ಮರದ ಬುಡದಲ್ಲಿ ಬಿದ್ದಿರುವ ಕಲ್ಲು.

1 ಸ್ವಸ್ತಿ ಶ್ರೀ ಜಯಾಭ್ಯುದಯ ಶಕ
2 ವರುಷ ೧೩೭೭ನೆಯ ಆಂಗೀರ
3 ಸ ಸಂವತ್ಸರ ಮಾರ್ಗಸಿರ ಅ
4 ಮಾವಾಸೆ ಆದಿತ್ಯವಾರ ದಂದು ಶ್ರೀಮ
5 ತು ಚಂದ್ರಗುತ್ತಿಯ ಗ ಉಡ
6 ರು ನೆಲ್ಲ ಕೊಪ್ಪದ ವೂರ ಮುಂ
7 ದೆ ಗದೆ। ೦ ॥ ೦ ಅಡಕೆ ತೋಟ ಸಹಿತ
8 ವಾಗಿ ತಮ್ಮ ಕುಲಸ್ವಾಮಿಯ
9 ನಂದಾದೀಪಕ್ಕೆಂದು ಸಮರ್ಪಿಸಿ
10 ದರು ಇದಕೆ ತಪಿದವರು ತಂಮ
11 ತಾಯಿಗೆ ತಪಿದವರು ಶ್ರೀ ಶು
12 ಭಮಸ್ತು ॥

# ಬೊಂಬಾಯಾಧಿಪತ್ಯದ ಉತ್ತರ ಕನ್ನಡ ಜಿಲ್ಲೆಯಲ್ಲಿ.

## ಗೇರಸೊಪ್ಪೆಯ ಶಾಸನಗಳು.

### 105

### ಗೇರಸೊಪ್ಪೆ ಗ್ರಾಮದ ನಗರಗೆರಿ ಬಸ್ತಿಯಬಳಿ ಕಡೇ ಬಸ್ತಿಯ ನಿವೇಶನದಲ್ಲಿ ನಟ್ಟ ಕಲ್ಲು.

ಪ್ರಮಾಣ 4′–6″×3′–0″

1 ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘಲಾಂಛನಂಜೀಯಾ ತ್ರೈಲೋಕ್ಯ ನಾಥಸ್ಯ ಶಾಸನಂ ಜಿನಶಾಸನಂ । ಶ್ರೀ. ಜಂಬೂ ದ್ವೀ

2 ಪ ಮಧ್ಯ ಸ್ಥಿತ ಜನಸರ····ರಮಣರ ವಾಥ್ಯಂಕೃತ ಶ್ರೀಯರ್ ಶದ್ಧರ····ಜಿನಪದಪದ್ಮ ಭೃಂಗ ···ಸ್ತಂಬಿತ·· ಜಾಯಾಕಂ ಪತ್ತನಂತ್ಯಕ್ತ ಪಂಕಂ

3 ·· ತ್ರೈ ವಿದ್ಯವಲ್ಲೀ ···· ಮುಕಸುಲಧರಾರಮ್ಯ ···· ಸ್ಥಿತ ಜಿನೇಂದ್ರ ಪಾದಯುಗ ಪದ್ಮ ಭೃಂಗಾ ಸಂಸಾ

4 ··ರ·· ಮಾಬ್ಧಿ···· ತೆಸೆದ······ದುಥೂನ್ನರೇಂ

5 ದ್ರಃ । ತದೀಯ ವಂಶೋದ್ಭವ ಮಂಗಭೂಪೋ ಸಾಹಿತ್ಯ ಲಕ್ಷ್ಮೀ ···· ಭಾಭಾತಿ ಲಕ್ಷ್ಮೀ ಜಿನಮಂದಿರೇಷು ? ಕಾಮಂಕಾಮಿತ ದಾಯಕಃ ಕನ

6 ರುಟ್ಕಂದರ್ಪ ಸರ್ವಪ್ರಿಯಃ ಕಲ್ಯಾಣ ಕಲನಾನಂತ ···· ಶ್ರೀಮಂಗ ಭೂಪಸ್ಯ ಜಿನೇಂದ್ರ ಪಾದದ್ವಯ ಪದ್ಮಗಂಧ ಮಿಳದ್ಭೃಂಗೋಭವತ್ಸಂತತಂ

7 ತದೀಯ ವಂಶ ಸಂಭೂತಃ ಕೇಶವಾಖ್ಯಃ ಕ್ಷಿತೀಶ್ವರಃ ವಶೀಕರೋತಿ ಸಹಸಾವಂದಿಗೇಹೇಷುಸಂಪದಂ ಕಾಂತತ್ವಂ ಭವತಾಸಿತಬ್ಯಹ ? ಮಿತಃ ···· ಮುಪಾಸಿತುಂಭವತುತೇ ಗಾತ್ರಂ ಹಿ

8 ಮಾದ್ರೀ ಕೃತಂ ॥ ಶ್ರೀಮತ್ಕೇಶವ ಭೂಮಿಪಾಲ ಚರಿತಂ ಶ್ರುತ್ವಾ ಸ್ತುವರ್ತ ಕಿನ್ನರೈಃ ತೋಷಾಕಂಪಿತ ಶಂಭು ಮೌಳಿ ವಿಳಸದ್ಗಂಗಾತರಂಗಾಸ್ಪದಂ ಆಶ್ರಯಾ ಶೋದಹತ್ಯಾಶು ಸ್ವಾಶ್ರಯಂಸ್ವತನಾಧಸಾ [ಸ್ವೀಯತೇ ಜಸಾ]

9 ಕೇಶವೇಂದ್ರ ಪ್ರತಾಪಾಗ್ನಿಃ ನಾಶ್ರಯಂ ತಾಪಯತ್ಯಹೋ । ಕೇಶವೇಂದ್ರ ಗುಣಾರ್ಣವಕಸ್ತಂ ಕೋವಾಶಕ್ನೋತಿ ಪಂಡಿತಃ ಆಕಾಶಸ್ಥಿತನ ಕ್ಷತ್ರಗಣನಾಕೇನ ಮುಚ್ಯ (ಶಕ್ಯ) ತೆ ॥ ವರ್ಧಮಾನಾನ್ವಯೋದ್ಭವೇ ನಿರ್ಧೂತಾಶ್ರಿತ

10 ದರಿದ್ರೆ ನಿಜ ಪತಿನಿಯ ಮಾಂತರ್ಧಿಯುತೆ ಹೊಂನ ಬರಸಿ ವಿಶುದ್ಧಾತ್ಮಿಕೆ ಆನೆವಳಿಗೆ ತಿಲಕವೆನಿಕ್ಕುಂ ಅಹೊಂನ ಬರಸಿ ಯರಸಂ ಶ್ರೀ ಹೈವನೃಪಂ ಜಿನಕ್ರಮಾಂಬುಜ ಭೃಂಗಂಬಾಹು ಬಲನಿರ್ಜಿತರಿ

11 ಪುಭೂಪಂ ಸಾಹಸಸಮುದ್ರನಭಿನವಕಾಮಂ । ತಯೋರಭೂನ್ನಿರ್ಮಲಜಕ್ಕಬರಸೀನುತಾ ಸುಶೀಲಾಜಿನ ಭಕ್ತಿಯುಕ್ತಾ ತಾಂ ಚೋಪಯೇಮೇವರಮಂಗಭೂಪೋ ಜಾಮಾತೃವರ್ಯೋ ಭುವಿಹೈ

12 ವರಾಜಃ । ಆನಿಂದಾದ ಪಿಸಿರ್ಗಂ ತುಂಭೀರವಃ ಖಲುಯೋಷಿತಃ ಮಂಗಭೂಪಾಲಕೀರ್ತಿಸ್ತುಕಾಮಿನೀವಾ ತಿಲಂಪಿನೀತ ಯೋರ ಭೂತಾಂಜಿನನಾಥನ ಮ್ಯಾಮಾತ್ರಾ ಪುನೀತಾಖಿಲ ಜೈನಲ ····

13 ಧಾತ್ರೀವ ಹೈವಣ ಶ್ರೀ ······ ಮಾಬಳರ ಸೀಸಮೂರ್ಜಿ ತಾಹ್ವಾನಯುತಾ ಸುಶೀಲಾ ಶ್ರೀಪನ್ನಮ್ರನಿಳಿಂಪಮೌಳಿವಿಳ ಸನ್ಮಾಣಿಕ್ಯ ······ ತ್ಸರ್ಪದ್ಯುತಿಪಾದಪದ್ಮನಖರ ಶ್ರೀ ಪಾರ್ಶ್ವನಾ

14 ಥೇನತು ಕಾಮಂ ಮಂಗರಸಾತ್ಮ ಜೋಗುರು ಗುಣ ಶ್ರೀ ಹೈವಣಾಖ್ಯೋ ಭವತ್····ಜೈನಯೋಗಿನಿಕರ ಸಾರ್ಹಿತ್ಯರತ್ನಾಕರರ್ ಶ್ರೀ ಮದ್ದಾ ತ್ಯನಿತಂಬಿನೀವನಿತರಾಂ .... ನೃಪಾಲಂಕೃತಾ ಭೂ

15 ಮೌಘೂರಿಗುಣೋ ಜಭಾಸ್ಕರಲ ಸತ್ಪ್ರತ್ಯಗ್ರಭಾಸಾನ್ವಿತಾಕಾಮಂಮಂಗನೃಪಾ ·· ಗುರುದಯಾದೇವೀ ···· ಶ್ರೀ ಮಾಬಳಾಂಬಾ ···· ಸುಧಾಸೂತಿದ್ಯುತಿ ಪ್ರತ್ಯಹಂ ॥ಕಂ॥

16 ಆಮಾಬಳರಸಿಯರ ಸಂಭೂಮಿಾಶ ವಿನಮ್ರಪಾದಕೇಶವ ಭೂಪಂ ಕಾಮಾರಿಧಸಿತ ಮಸ್ತಕ ಸೋಮದ್ಯುತಿಕೀರ್ತಿ ·········ಸುರಲೋಕದಸುರತರುವಿನ ಗುರು ಫ

17 ಲಮಂ ಮೆದ್ದುತೃಪ್ತಿಯಿಲ್ಲದೆ ಸುರರುಂಧರೆಯೊಳ್ಬುಸುರರಾದರುವರ ಕೇಶವಭೂಪಕಲ್ಪ ಭೂಜಸ್ಪೃಹೆಯಿಂ··ಭಾತಿ ·· ಕೀರ್ತ್ಯಾರ್ಶ್ರೀಕೇಶವಕ್ಷ್ಮಾ ಪತಿರಪ

18 ರಾಂಬುಧಿತೀರಗಾಜಿನಪತಿಶ್ರೀಪಾದ ಪದ್ಮಾನತಾ ಭೂಮೌಭಾವಿ ಜಿನೇಂದ್ರ ಚಂದ್ರವಿಲಸ ಚ್ಚಾರಿತ್ರನು ········ ರಾಗೋದಯಾ ಸಂಸಾರ ಸಾರೋದಯಾ ।

19 ತ್ರಬ್ಧ್ಯಗ್ನೈಕ ಕಸಮನ್ವಿತೇ ಶಕಕೃತೇ ಶ್ರೀಶಾರ್ವರೀವತ್ಸರೇ ಮಾಘೇಮಾನಿತ ಪಂಚಮಿಾ ತಿಥಿಯುತೆ ಶ್ರೀಸೌಮ್ಯ ವಾರೇ ಸಿತೇ ಪಕ್ಷೇ ······ನಾದಿರಾಜವನಿತಾಥರ್ಮಾಭಿಧಾನೇಪುರೇ ಕಾಮಂಕಾರಯತಿಸ್ಮ

20 ಜಕ್ಕಬರಸೀಪಾರ್ಶ್ವಪ್ರತಿಷ್ಠಾಂಮುದಾ । ಅನಂತರಂ ನಗಿರದ ರಾಜಹೊಂನರಸನನ್ವಯವಾರ್ಧಿಗೆ ಚಂದ್ರಂಸಲೆ ತಾಂ ಸೊಗಯಿಪ ಹೈವಭೂಪನಳಿಯಂ ಕಲಿಕಾಲದ

21 ಕರ್ಣನೆಂಬರೀ ಜಗದಲು ಮಂಗಭೂವರನ ಬಾಂಧವೆತಂಗಳೆ ದೇವಿನಂದನಂನಗೆ. ಮೊಗದಾ ಕಲ್ಪಭೂಜ ಕೇಶವ ರಾಯನು ಕೀರ್ತಿವಲ್ಲಭಂ ।ಕಂ। ಅಂತಾನಗಿರದ ರಾಜ

22 ರ ಸಂತಾನಾಬ್ಧಿಯೊಳು ಲಕ್ಷ್ಮೀವಾಣಿಕದೇವೀ ಕಾಂತನೆನಿ ಪಂಬೀ ರಾಯಂಗೆ ಕಂತುವಿನಂತುದಯಿಸಿರ್ದ ಸಂಗ ನೃಪಾಲಂ । ಸಂಗವಿದೂರಕ್ಷೇಮ ಪುರ ತೀರ್ಥಜಿನೇಂದ್ರ ಪಾದ

23 ಪದ್ಮಕಂಸಂಗಣಜೀಯನಾತ್ಮಜನು ಅಂಬಮಹೇಶನ ಪುತ್ರ ಸಂಗಮಂ ಭೃಂಗನನ್ವಿತತನ್ನಮನವೊಲ್ವಂತೀ ? ಧರ್ಮವ ಮಾಡಿ ಪೂರ್ವದೊಳ್ಪಿಂಗಿದ ಧರ್ಮವೆಲ್ಲ

24 ವನುಪಾಲಿಸಿದಂ ರವಿಚಂದ್ರರುಳ್ಳಿನಂ । ಅಂತಾ ಧರ್ಮ ಪ್ರತಿ ಪಾಲಕನೆನಿಪ ಶ್ರೀ ಸಂಗಭೂಪಾಲಂ ಸುಬುದಿಂ ರಾಜ್ಯಂ ಗೆಯುತ್ತಿರಲೂ ಯಿಳೆಯೊಳು (ಯಿಳೆಯೊಳು) ಕುಂತಳನಾಡು ಕರರಂಜಿ

25 ಸೆಪಶ್ಚಿಮನಾಡು ದೇಶದೊಳ್ಕಳ ವೆವಾಪೀ ಕೂಪನದೀಮಾಮರ ನಿಂಪನಸೀಳೆ ಬಾಳೆಯಿಂಬಳಸಿಕೊಂಡು ಕೋಕ ಮಿಥುನ ಮೊದಲಾಗಿರಲಲ್ಲಿ ಯಾರವೆಗಳ ನಡವೊಪ್ಪು

26 ವೀಪುರವನಾಳುವ ನಜ್ಜ ನೃಪಾಲನೆಂಬವಂ । ಯಿರ ಉಂದೂರಧಿ ಪತಿ ತಾಂ ಕರವೊಪ್ಪುವ ಅಡಿಯರ ಬಳಿಯಿಂಕರ ಮೆಸೆವನು ತಂಮರಸ .... ಯಳಿಯಂಕೀರ್ತಿ

27 ವೆತ್ತನಾತಂಮರಸಂ । ಆತಂಮರಸನಗ್ರಜೆಯ ತನೂಜಂ ಧರೆಯೊಳಿರುಂದೂರ ಭೂಸುರನುತ ಕಲ್ಲರಸನನುಜ ತಂಗ ದೇವಿಗೆ ವರನೆನಿಪ ಹೈವೆಯರಸನವರ ಪುತ್ರಂ ಪ

28 ದ್ಮಣರಸಜಿನಪದಭಕ್ತಂ । ಆ ಪದ್ಮಂಣರಸನೂ ಆ ತನಗ್ರಜೆಜಕ್ಕಲ ದೇವಿಯ .... ತಂದ ಹೈವಂಣರಸರು ಪಾರ್ಶ್ವ ತೀರ್ಥೇಶ್ವರ ......ಮಾಡಿದ ನಿತ್ಯ ಪೂಜೆ

29 ಆಹಾರದಾನ ಮೊದಲಾದ ವೆಲ್ಲವಂ ಪುರೋ .... ಡಿಗೆ ಸಲಿಸಿ ಮುಂನಿನ ಧರ್ಮವೆಲ್ಲವ ನೆಜಮಾಡಿ ಬಳಿಕ್ಕತಂ ನೊಳು ಸಂನುತ ಬುದ್ಧಿ ಪುಟ್ಟೆಜಿನೇಂದ್ರನ ಭಿಷೇಕವು ನಿತ್ಯಪೂ

30 ಜನಂ ಮುನ್ನೆ ಸೆವಂನದಾನ ಮೊದಲಾದವನುಂಪಿರಿದಾಗಿಮಾಡಿ ತೃಪ್ತಿಯಿಂದೊಲಿದು ಪದ್ಮರಸಂಮಿಗೆ ಕೊಟ್ಟವೃತ್ತಿ ಯಂ । ಶ್ರೀ ಪಾರ್ಶ್ವತೀರ್ಥೇಶ್ವರದ ಶ್ರೀಕಾರ್ಯ

31 ಕ್ಕೆಯೂ ಅಂಗ ಭೋಗ ಚಯಿತ್ಯಾಲಯದ ಜೀರ್ಣೋದ್ಧಾರಕ್ಕೆ ಧಾರಾ ಪೂರ್ವ್ವಕವಾಗಿ ಕೊಟ್ಟಂತಾ ವೃತ್ತಿಯ ವಿವರ ಹೈವಂಣರಸರು ತಾವು ಮೂಲವಾಗಿ ಆಳುತಿರ್ದ ಕೊಣುವಣೆಯ

32 ಲಕಂಗನ ಕುಳಿಯಹಂ ನೆರಡು ಮೂಡೆಸುನಿಗೆ ಸೀಮೆ ಮೂಡಲು ಅಭಿನಸಟ್ಟಿಯ ಹಿತ್ತಿಲಗದೆ ತೆಂಕಲುಹರಿದು ಕೋಡಿ ಗಡಿ ಪಡುವಲು ತಮ್ಮರಸರ ಹೊಸಗದ್ದೆಯಲು ಇಕ್ಕಿದ ಕಲ್ಲಗಡಿ

33 ಬಡಗಲು ಹೀರೆಯ ಭಾಗೆಗೆಡಿಯಿಂತೀ ಚತುಸ್ಸೀಮೆಯಿಂದೊಳಗುಳ್ಳಕಳವೆಯ ಸಮಸ್ತ ವೃತ್ತಿ ಪದ್ಮರಸರು ತಾವು ಮೂಲವಾಗಿ ಆಳುತ್ತ ಇದ್ದ ಹೊಂನಮನ ಕೆಱೆಯ

34 .... ಮೇಲೆ ಯೆತ್ತಿ ಹೊಂನಾ ಬರದ ನಾಲ್ಕುವರೆ ಹೊಂನನೂ ತಂಮ ಅಂಮ ತಂಗಲ ದೇವಿಯರಿಗೆ ಪೂಣ್ಯಾರ್ಥ ಪರಿಹಾರಮಾಗೆ ಬಿಟ್ಟುದು ಹೈವಂಣರಸರು ತ

35 ಮ್ಮಮನಃ ಪೂರ್ವಕವಾಗಿ ಕೊಟ್ಟು ಸರ್ವಮಾನ್ಯವಾಗಿ ಮೂಲ ಸ್ಥಳವಾಗಿ ತಾವು ಆಳುತ್ತಂಯಿದ್ದ .... ಯಡೆಯ ಮಜ್ಜನ ವೃತ್ತಿಗೆ ಗಡಿಮೂಡಲು ಹೊಳೆತೆಂಕಲು ಹೊಳೆ ಗಡಿ ಪಡುವಲು

36 ..........................................

37 ...... ಸಮಸ್ತ ವೃತ್ತಿಯನೂ ಆಹಾರದಾನಕ್ಕವಾಗಿಯಾ ಚಂದ್ರಾರ್ಕವಾಗಿ

38 ಧಾರಾಪೂರ್ವಕಂ ಮಾಡಿಕೊಟ್ಟರು ಮತ್ತು ಆಹಾರದಾನಕ್ಕೆ ಯಾ ಚೈತ್ಯಾಲಯದ .... ಗೃಹ

## 106

ಗೇರಸೊಪ್ಪೆಯ ನಗರಗೇರಿ ಬಸ್ತಿಯಬಳಿ ಕಡೇಬಸ್ತಿಯಲ್ಲಿರುವ ಶಾಸನದ ಹಿಂಭಾಗದಲ್ಲಿ

1 ಕೇಸವ ಕುಳಿಮೂಡೆ ೧೨ ಹೊಂನೂರಲಿ ನಂಗೆಮಕ್ಕೆ ೧೦ ಮೂಡೆ ಯಿಳೆಯ ಮುದ್ದಾ ೭ ಮೂಡೆತೆ

2 ಱ ಗಾಗಿ ಮೇಲಾದರು ಆಹೊಂನಿನದಾನಕ್ಕೆ ಮಾಗೊಡಾಸೆಯ ಆರೆಕಾರಸಿವದೇವಯ ॥

## 107

ಗೇರಸೊಪ್ಪೆಯ ನಗರಗೇರಿ ಬಸ್ತಿಯಬಳಿ ಮೂಡೆ ಜಿನದೇವರ ಪೀಠದಲ್ಲಿ

1 ಘನಶೋಕವಲೀ ಮಂಜುಳ ದೇಶೀಗಣಲಲಿತ ಕೀರ್ತ್ತಿಮುನಿಸೂನೋಃ । ಶ್ರೀದೇವಚಂದ್ರ ಸೂರೇರುಪದೇಶಾನ್ನೇ ಮಿಜಿನಬಿಂಬಂ ॥

2 ಶ್ಲೋಕಃ ॥ ಓಜಣಶ್ರೇಷ್ಠಿಪುತ್ರೋ ಸೌಕಲ್ಲಪಶ್ರೇಷ್ಠಿಪುಂಗವಃ । ಆಕಾರಯತ್ಸುತೋಯಸ್ಯಮಾಬಾಂಬಾಗರ್ಭಜೋಜಣಃ

## 108

ಗೇರಸೊಪ್ಪೆಯ ನಗರಗೇರಿ ಬಸ್ತಿಯಬಳಿ ವರ್ಧಮಾನ ಬಸ್ತಿಯಪಕ್ಕದಲ್ಲಿ ಒಂದನೆಯ ಶಾಸನ

ಪ್ರಮಾಣ 6′ 0″ × 2′ – 9″

1 ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ ಜೀಯಾ ತ್ರೈಲೋಕ್ಯನಾಥಸ್ಯಶಾಸನಂ ಜಿನಶಾಸನಂ॥ ಶ್ರೀಮದ್ದೇವ

2 ಜಿನೇಂದ್ರಾಯತಸ್ಮಾನಂತಮಹಾತ್ಮನೇ । ಸರ್ವಬೋಧವಿಶಿಷ್ಟಾಯ ಭವ್ಯಾಳಿಕುಮುದೇಂದವೇ । ತಂವಂದೇದೇವ ದೇವಂಸುರುಚಿ

3 ರಮನಘಂಚಾರು ಕೈವಲ್ಯನೇತ್ರಂ ನಿತ್ಯಂನಿರ್ವಾಣರಾಮಾಕುಚವಿಲಿಖ ತ್ಕಾಶ್ಮೀರರಾಗಂವರಾಂಗಂತುಂಗಂ ದೇವೇಂ ದ್ರಾನಮ್ರಪಾ

4 ದಂಗುಣವಿಲಸದನಂತಂ ಸ್ವಬೋಧಾತ್ಮತತ್ವಂ । ಮಾಂಗಲ್ಯಂಥವ್ಯಸಾರ್ಥಂ ನಿಹತಮನಸಿಜಂನವ್ಯಥರ್ವಾಸ್ವರೂಪಂ । ಇದು

5 ಜಂಬೂದ್ವೀಪಮಂತಾ ಭರತವಿಷಯದೊಳ್ ಪಡುವಮೇರುಸಿರ್ದ‥ಪದಪಿಂದಾ ಮೇರುವಿಂದಕ್ಷಿಣವೆತುಳುಕೊಂಗಿಂದ ವೀಶುದ್ಧ

6 ದೀಪಂಮುದದಿಂ‥‥ತೆಂಗು ‥ವಳಿಪನಸಂನದೀತೀರದೊಳ್ ಕೌಂಗು ಜಂಬೂಸದನಂ ಚೆಲ್ವಾಗಿತೋರ್ಕ್ಕುಂ

7 ‥‥ಬಿಡಾರಹಸ್ತಿಸಮೂಹಂ । ಆ ತುಳುವಾಧೀಶರಮಣಿ‥‥ವದನಮಾಗಿ ತೋರ್ಪುದುನಯದಿಂ ನೀತಿಯುತ ಗೇರಸೊಪ್ಪೆಸೋಲಿ

8 ಸುತಿರ್ಪುದು ವಿಭವದಿಂದಾಯುಮರಾವತಿಯುಂ । ಅಂತಾನಗಿರಿಯ ರಾಜ್ಯಕಧೀಶ್ವರನೆನಿಸಿದ ಮರ ಲಯರಸರನ್ವಯ ಸಂಪ್ರದಾಯದಾ

9 ಯದಿಂಬಂದ ಕೀರ್ತಿಗೆ ಜಯಸ್ತಂಭನೆನಿಸಿರ್ದ ಹೈವೆ ಭೂಪಾಳನ ಪ್ರತಾಪ ವೆಂತೆನೆ ಸಾಂದ್ರ‥‥ದೇಭ ಕುಂದೋದ್ಗಮ ಕುಮುದನ

10 ಮಳಮಲ್ಲಿಕಾಪುಲ್ಲ ಮುಖ್ಯಬೃಂದಂಗಂಗಾತರಂಗತರಳಹರಹಾಸಂ ತಾರನೀಹಾರಹಾರಂ ಸಂದಿರ್ದ ಚಾರು ಕೀರ್ತಿ‥‥‥‥‥‥‥‥

11 ಪ್ರಸವದನು ನಯವೆಂಬಿನ‥‥‥‥ಮಾಳ್ಪುದು‥‥‥‥ಶ್ರೀಹೈವೆ ಭೂಪಾಳನ ನಿಜಯಶಮಂ ಬಣ್ಣಿಸರ್ ಬಲ್ಲನಾ

12 ವಂದಕ್ಷಿಣ ಮಂಡಳಿಕ‥‥ನಿಜನಿವಾಸ‥‥ಸಲ್ಲಕ್ಷಣ ರಾಜರಾಜ ಕಟಕಂಗಳ ಸೂರೆಯುನಾ

13 ಯದೆ ತೊಂಡಮಂಡಳ ಭೂಪರಮಂದಿ ರಕ್ಷಿಸು ರಕ್ಷಿಸು ಹೈವೆ ರಾಜವೆನಿತಿರ್ಪುದು‥‥‥‥‥‥

14 ನಳಿಯದೆ ನೋಳ್ಪಡಂ ಮಾವನಿಯಂ ಕಕಾಬಿರತಿಚಕ್ರದ ಹಸ್ತಪರಾಕ್ರಮಾಂಕನೀ ಹೈವ ನೃಪಾಳ ಚಕ್ರಯ

15 ಶೋ‥‥‥ನಿನ್ನಯ ದುಂದುಭಿ ತಾಡನಂಗಳಿಂ ಜಾವಳಿ ಶಬ್ದದಿಂ ಪರಿದುದೂರದಿ ಸಂಚರಿಸುತ್ತ ಮಿರ್ಪುದಾ

16 ‥‥‥‥ಯೆಸೆವ ರಾಜಹೃದಯಂಗಳು ಭಿನ್ನಗಳಾದವದ್ಭುತಂ । ಶ್ರೀಮದ್ದೇವ‥‥ಗುರುಗುಣಾದ್ಭುತ ಮಹಾನಾಗೇಂದ್ರ ಪಂಚಾ

17 ಸ್ಯ‥‥‥ಸಂದಿರ್ದ‥‥‥ಹಾಸದ ವೈಹಾಳಿ ಮಹಾಡಾಕಿನೀ ನಾವೋಪದ್ರವ ಮೆಲ್ಲವಂ‥‥‥ಶ್ರೀಪಾರ್ಶ್ವ ತೀರ್ಥೇಶ್ವರಾ

18 ವಾಸಮಂ ಶ್ರೀಮದನಂತಪಾಲಂಗೀಗೆ ನಿತ್ಯಂ ದೀರ್ಘಾಯುಮಂ ಶ್ರೀಯುಮಂ ಅಂತಾನಗಿರಿಯಪುರ ವರಾಧೀಶ್ವರಂ ಮಾಸಾ‥‥‥‥‥‥‥

19 ವನಿಯಂ ಕಕಾಬಿಮಾವಂಗೆ ಮಲೆವರಾಯರ ಗಂಡ ಶಿವಸಿಂಹಾಸನ ಚಕ್ರವರ್ತಿ ಪರಸಾಳುವದಡ್ಡವಿಭಾಡಕಲಿಗಳ ಮುಖದ ‥‥

20 ಸಮ್ಯಕ್ತ ಚೂಡಾಮಣಿ ವಸಂತರಾಜ್ಯ ಚಾತುರ್ವರ್ಣ್ಯಕ್ಕೆ‥‥‥ಹಳುವರಾಯರ ಗಂಡ ಹೈವೆ ಭೂಪಾಲಂ ಸುಖ ಸಂಕಥಾವಿನೋ

21 ದದಿಂರಾಜ್ಯಂಗೆಯ್ಯುತ್ತಿರಲು ಆ ಗೇರಸೊಪ್ಪೆಯ ಮಹಾಜನಂಗಳ ಗುಣಂಗಳೆಂತೆಂದೊಡೆ ‖ ವೃ ‖ಅದರೊಳು ನಾನಾಜಾ

22 ತಿ ಪರದರಗ್ರಣಿ ಸಮ್ಯಕ್ತರಾದೀ ಜೈನರ್ಪಡೆವರ್ ಜೈನ ಮಾರ್ಗಾಶ್ರಯ ಜಲನಿಧಿ ಸಂವರ್ಧಿತ ಪೂರ್ಣಚಂದ್ರರ್ ಮುದಮಂ ಕ್ರೋಧಾದಿ

23 ‥‥ಮಾದುದ್ಪರ್ಪೆರ್ಕುಳನಿವರ್ಬಿಟ್ಟು‥‥‥ರಾದರ್‥‥‥ ಮುಖ್ಯಮಾದಾಧಿಪನಖಿಳಕಳಾವಲ್ಲಭರ್ ಕೀರ್ತಿವೆತ್ರರ್ ಅಂತಾತಾ‥

24 ಮಾದಂಡಾಧಿಪಗಳ‥‥‥‥‥‥ಸಹಜಾತ ಕುಲಕ್ಷತ್ರಿಯರಾದರಸುಗಳನ್ವಯ ಮೆಂತೆಂದೊಡಸ್ವಸ್ತಿಸಮಧಿಗತ ಪಂಚಮಹಾ

25 ಮಹಿಮ ಪ್ರಸಿದ್ಧಮಾದ ಬನವಾಸಿಪುರವರಾಧೀಶ್ವರವೈಜಯಂತೀ ಮಧುಕೇಶ್ವರಲಬ್ಧ ವರಪ್ರಸಾದ ಮೃಗಮದಾಮೋದ ಗೋಕರ್ಣ‥‥‥‥

26 ಮಹಾಬಳೇಶ್ವರ ದಿವ್ಯ ಶ್ರೀಪಾದ ಪದ್ಮಾರಾಧಕರುಂ ಪರಬಳಸಾಧಕರುಂ ಹರಸಿ ಬರುವರ ಶೂಲ ನಿಗಳಂ ಕಮಲ್ಲಚಲ ದಂಕ ರಾಮರಾಯ

27 ರ ಗಂಡ ಸಾಹಸಮಲ್ಲ ಗಂಡರದಾವಣಿ ಸತ್ಯರಾಧೇಯ ಸಾಹಸೋತ್ತುಂಗ ಶರಣಾಗತ ವಜ್ರಪಂಜರ ಪಶ್ಚಿಮಸಮುದ್ರಾಧಿಪತಿಯಪ್ಪ ಹೈವೆ

28 ಕ್ಷತ್ರಿಯಕುಲಕಮಲವನಮಾರ್ತಂಡ ಪರನೃಪತಾಮರಸ ‥‥‥ ಪೂರ್ಣಚಂದ್ರನೆನಿಸಿದ ಬಸವದೇವರಸರು‥ ದೇವರಸರ

29 ರಾಜ್ಯಲಕ್ಷ್ಮಿ ಯೆನಿಸಿದ ಚಂದ್ರಪುರವೆಂಬ ಪಟ್ಟಣದೊಳು ರಾಜ್ಯಂಗೆಯ್ಯುವ ಕಾಲದೊಳು ಆ ಅರಸುಗಳಿಗೆ ಪಟ್ಟವರ್ಧನ ಬಾಹತ್ತರನಿಯೋ

30 ಗಿಗಳ್ ಜಿನಸೇವ್ಯನುಂ ತ್ರಿಶಕ್ತಿಬಲಯುತನುಂ ಷಡ್ಗುಣ ಸಮರ್ಥನುಂ ರಾಜಕ್ಷತ್ರಿಯ ಚಾತುರ್ದಂತ ಸೋಮೇಶ್ವರ ದಂಡನಾಯಕ

31 ನ ಅನ್ವಯದ ಕೀರ್ತಿ ಯೆಂತೆಂದೊಡೆ ಶ್ರೀ ಸೋಮದಂಡ ಪುತ್ರನು ಭಾಸುರ ಕಾಮಣ್ಣ ದಂಡನಾಯಕನೆನಿಪಂಸಾಸನ ಚಕ್ರ

32 ವರ್ತಿಧರ್ಮಧಾರಕ ಸಾಮಂತಂ ಕೀರ್ತಿವೆತ್ತ ನಮಳಚರಿತ್ರಂ ಶ್ರೀಮತ್ಸೋಮಣ ದಂಡನಾಯಕಂಗೆ ಕಾಮಾರ್ಥ ‥‥:‥‥ತಾವುಪುಟ್ಟಿದರ್ ಶ್ರೀಮದ್ರಾಮಣ ನೆಂಬ ಹೆಗ್ಗಡೆಯ

33 ಸುವೆಂಬೀ ಪುತ್ರಸಂಸೇವ್ಯಕಂ ರಾಮಂಪುಟ್ಟಿದ‥‥‥ದಶರಥಸಾಮರ್ಥ್ಯದಿ‥‥ಯಪರಾಜಿತಾ ರಮಣಿಗಂ ಸಾಹಿತ್ಯರತ್ನಾಕರಂ ಅಂತಾ

34 ರಾಮಣನೆಂಬ ಹೆಗ್ಗಡೆ ರಾಮಕ್ಕಂಗೆ ತಾಂಪುಟ್ಟಿದಂ ಶಾಂತಂ ಯೋಜಣ ನಂಬಿಪುತ್ರ. ನೆಸಿಸಲ್ ಕುಂತೀದೇವಿ ಸಮಂತು

35 ಶ್ರೀಪಾಂಡುರಾಜಂಗೆತಾಂ ಶಾಂತಂ ಧರ್ಮಜನೆಂತುಪುಟ್ಟಿದವೊಲಾ ಸಮ್ಯಕ್ತ್ವ ರತ್ನಾಕರಂ ಅಂತಾಯೋಜಣ ಸೆಟ್ಟಿಯ ಜನನಿ ರಾಮಕ್ಕನನ್ವಯಃ ಮೆಂತೆಂದೊಡೆ

36 ವಸುಧೆಯೊಳು ನೆಗಳ್ತೆವೆತ್ತ····ಅಸಮೈಶ್ವರ್ಯ ಸಂಪನ್ನರುಂ ದಾನಗುಣ ಸಂಪನ್ನರು ಮಪ್ಪನಂಬಿಸೆಟ್ಟಿಯ ರತಮ್ಮ ಸೆಟ್ಟಿಸಹೋದರ ರೆನಿಸಿದಮ

37 ಲ್ಲಸೆಟ್ಟಿ ಹೊನ್ನಪಸೆಟ್ಟಿ········ಗುಣಾಢ್ಯರುಂ ಜೈನಜನಬಾಂಧವರುಂ ಆ ಸೆಟ್ಟರೊಳಗೆ ಮಹಾಘನನೆನಿಸಿದ ಆ ಹೊನ್ನಪಸೆಟ್ಟಿ

··································································

38 (ಇಲ್ಲಿ ಕೆಲವು ಪಙ್ತ್ತಿಗಳಲ್ಲಿ ಸೆಟ್ಟಿರ ಹೆಸರುಗಳೂ ಅಕ್ಷರಗಳೂ ಹೋಗಿವೆ)

39 ············ ಶಕಕಾಲ··················ಸಾವಿರದ ಮುಂನೂರ················

(ಮುಂದೆ 5, 6 ಪಙ್ತ್ತಿಗಳು ಸರ್ವಥಾ ಕಾಣುವುದಿಲ್ಲ)

## 109

### ಗೇರುಸೊಪ್ಪೆಯ ನಗರಗೇರಿ ಬಸ್ತಿಯಬಳಿ ವರ್ಧಮಾನ ಬಸ್ತಿಯಬಳಿ ೨ನೆಯ ಶಾಸನ

ಪ್ರಮಾಣ 4′ –6″ ×3′ –3″

1 ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋ ಘಲಾಂಛನಂ ಜೀಯಾ ತ್ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ। ನಗಿರಿಯ ದೇಶವೆಂಬ ಲಲನಾಮು

2 ಖಕ್ಕೆ ವೆಸೆದಿರ್ಪೀ ಗೇರಸೊಪ್ಪೆಗೆ ವರಸೆಜ್ಜೆಕಾಱಿಸಲೆದಂಡಿಗೆಯ ಛತ್ರಸು ಚಾಮರಾಳಿಯಿಂ ಬಗೆವುಗ ತೋರ್ಪಹ್ಯೆವೆ ನೃಪರಾಮಕಂ—ಬಂಮಪು

3 ತ್ರನೊಬ್ಬಣಂ ನೆಗಳೆ ಸಂನುತನಾದ ಜಿನಚೈತ್ಯಜಿನಾಲಯಮಂದಿರಂವರಂ।ಕಲಿಯುಗದೊಳ್ಮಹಾಪುರುಷಯೋಜಣತಂನ ಮಂಗಳ········

4 ಮಣಸಮವೆಂದು ಭಾವಿಸಿ ನಿತಾಂತ······ಸ್ಥಾನಮಂ ಜಿನಾಲಯಂಗಳಂ ಸಲೆಮಾಡಿ ಗೋಪುರ ಸುಮನೋ ಹರ····ವಿಚಿತ್ರ····ವಳಯಮನಂತನಾಥನಪತಿ

5 ಯ ···ದೇಂಕೃತಾರ್ಥನೋ। ಅಂತಾಯೋಜಣಸೆಟ್ಟಿಯ ಪ್ರಾಣವಲ್ಲಭೆಯಾದ ರಾಮಕ್ಕನ ಗುಣಂಗಳೆಂತೆಂದೊಡೆ ಶ್ರೀಮತು ಸಂ······

6 ತನಾಥನ ಪದಾಂಬುಭೃಂಗನು ಯೋ

7 ಜಣಸೆಟ್ಟಿ ಪ್ರ················ನಿನಿಬರು

8 ಲಾಂಗ······ರಮ್ಯ·· ···ಗೋತ್ರಚಿಂ

9 ತಾಮಣಿ ಪಾರ್ಥಿವ····ತ್ತಪಮೆನೆ

10 ····ದೊಳ್ ಸತ್ಯಧೀರೋದಾತ್ತ······

11 ಸೆವ ರಾಮಕ್ಕನೊಪ್ಪಿದಳೀ ಧರಿತ್ರಿಯೊಳು

12 ಪತಿಭಕ್ತಿಶೀಲವತಿ ಭೂನುತ ಚಾರುಚರಿ

13 ತ್ರೆ. ಸಕಳ ಜೀವದಯಾಪರೆ ಸಂತತ ಚತುರ್ವಿ

14 ಧ ದಾನದೊಳತಿ ನಿಪುಣತೆಯಿಂದೆಸೆವಳೀ

15 ರಾಮಕ್ಕಂ। ಜಿನಮತವಾಕ್ಯದೊಳು

16 ······ಸರೆ ಜಿನರಾಜ ಪದಾಬ್ಜಭೃಂಗೆತಾಂ ಜನನುತ ಚಾರು

17 ····ಸೀಲೆಗುಣ ಸುವ್ರತ ದಾನ ಪೂಜೆಯಿಂ?

18 ··ಮುಖಿ ಕಾಮಿನೀಜನ ಶಿರೋಮಣಿ ಯೊ

19 ····ಯೊಗ್ರನಿಜನಾಮದಿಂ ನಿಜಕುಲೋಂನತಿ ರಾಮಕನೊಪ್ಪುತಿರ್ದ್ದಳು॥ ಶ್ರೀ ಜಿನರಾಜಪೂಜೆಯೊಳು ಶ್ರೀ ಮುನಿ ರಾಜಪದಾಬ್ಜ ಸೇವೆ

20 ಯೊಳು ನೈಜಗುಣಂಗಳಿಂ ವಿನಯದಿಂ ಭಯದಿಂ ನಿಜಭಾವತುಷ್ಟಿಯಿಂ ಪೂಜಿಸಿ ಭಕ್ತಿಯಿಂದೆಱಗಿ ತಾಂ ಸ್ತುತಿಮಾ ಡಿಯುಂ ಕೀರ್ತಿ

21 ಯೊಳಿಂತು ಬಣ್ಣಿ····ಕೊಂಡೀ ನಿಜನಾಮದಿ ರಾಮಕನೀ ಧರಿತ್ರಿಯೊಳು ಕಮಳದಳಾಯತಾಕ್ಷಿ ಕಮಳಾನನೆ ಕಮಳ ಸುಗಂಧಿ ಕೋಮಳ

22 ವಿಮಳ ಲತಾಂಗಿ····ರಸಯುತರೀ ಜಿನರಾಜಪೂಜೆಯೊಳ್ಸಮರಸಭಾವದೊಳ್ ಸರೆಮಾಣಿಕಸೆಟ್ಟಿಪುತ್ರಿ ರಾಮ

23 ಕಂ ಕ್ರಮಗುಣಹಸ್ತಿ ಕಲ್ಪಲತೆಯಂ ನೆಱೆಯೊಪ್ಪುವಳೀ ಧರಿತ್ರಿಯೊಳು। ಕಮಳಾಕರದೊಳು ಕಮಳಿನಿ ಕಮಳದೊಳಂ

24 ಕಮಳೆ ಪುಟ್ಟುವಂತಿರೆ ನಾಗಮನಮಳಾನ್ವಯದೊಳು ರಾಮಕ ವಿಮಳ ಗುಣಾಭರಣೆ ಪುಟ್ಟಿದಳ್ಕಲಿಯುಗದೊಳು ಆ

25 ರಾಮಕ್ಕನ ಅನ್ವಯವೆಂತೆಂದೊಡೆ। ಹುಲಿಗೆಱೆಯ ಪಂಚಬಸ್ತಿಯ ಮುಂದಣ ಹಿರಿಯ ಅಂಗಡಿಗೆ ಮುಖ್ಯ

26 ವಾದ ಕಿಱಿಯ ರಾಮಸೆಟ್ಟಿ ಆಮದುವಳಿಗೆ ಗಂಗಾಯಿ ಅವರ ಮಕ್ಕಳು ಬೈಚಿಸೆಟ್ಟಿಯರು ಆತನತಂಗಿ ಸೋಮವ್ವೆ

27 ಆ ಸೋಮವ್ವೆಯನು ಆಹುಲಗೆಱೆಯ ಮಾಣಿಕಸೆಟ್ಟಿಗೆ ವಿವಾಹಮಾದೀ······ಅವರ ಮಗಳು ನಾಗವ್ವೆ

28 ಆಕೆಯ ತಂದೆ ಮಾಣಿಕಸೆಟ್ಟಿ ಸಮಸ್ತರೂ ಆ ಬೈಚಿಸೆಟ್ಟಿ ಹುಲಗೆಱೆಗೆಯ್ದಿ ಹಂದಿಗುಳದಲ ಪ್ರ······

29 ತಾಗಿ ಅನಾಗಬ್ಬೆಯನೂ ಸಲಹಿ ಹಿರಿಯ ಹಂದಿಗುಳದ ಚಂದ್ರನಾಥಸ್ವಾಮಿಗಳ ಚೈತ್ಯಾಲಯದೊಳು ಪೂಜೆ

30 ಆದಿಕೆ ಶ್ರೀಕಾರ್ಯ್ಯ ನಡೆವಂತಾಗಿ ವೃತ್ತಿಯನೂ ಬಿಟ್ಟು ಶಾಸನವ ಹಾಕಿಸಿದರು ಆ ಬೈಚರಸಿಯುತಂ

31 ಮ ಸೊಸೆ ನಾಗವೆಯನೂ ಗೇರಸೊಪ್ಪೆಯ ಸೆಟಿಗುತ್ತವಾಯಿ ಓಜೆಯುಮಗ ಮಾಣಿಕಸೆಟ್ಟಿಯನೂ ತಾನು ವಿವಾ
32 ಹವಮಾಡಿ ಆ ಮಾಣಿಕಸೆಟ್ಟಿಯನ್ವಯವೆಂತೆಂದೊಡೆ ಗುಚ್ಚಕ್ಕಿಯ ನಾಗಸೆಟ್ಟಿ ಯ ಮಗಳು ರಾಮಪ್ಪೆಆಕೆಯ ಪು
33 ತ್ರ ಮಾಣಿಕಸೆಟ್ಟಿ ಮಾಣಿಕಸೆಟ್ಟಿಗೂ ನಾಗವೆಯವರಿಗೂ ಜನಿಸಿದ ಮಕ್ಕಳು ಹರಿಸೆಟ್ಟಿ ಕಾಮಣ
34 ನೇಮಂಣಸೆಟ್ಟಿ ಸರಣಸೆಟ್ಟಿ ಸಂಗಪ ಯಿಂತಯ್ವರೊಳಗೆ ರಾಮಕ್ಕನನೂ ಗೇರಸೊಪ್ಪೆಯ ರಾಮಣ ಹೆಗ್ಗಡೆಯ ಮಂಗರಾಜ
35 ಣನ ಓಜಂಣಂಗೆ ವಿವಾಹವಮಾಡಿ ಆ ವೋಜಂಣಸೆಟ್ಟಿಯೂ ರಾಮಕ್ಕನೂ ಸುಖಸಂಕಥಾ ವಿನೋದದಿಂ
36 ದಿಹಲ್ಲಿಗೆ ಗೇರಸೊಪ್ಪೆಯ ಅನಂತತೀರ್ಥಂಕರ ಚೈತ್ಯಾಲಯವ ಮಾರಬ್ಧಿಸಿ ಮಹಾಪ್ರತಿಷ್ಠೆಯನೂ ಮಾಡ್ಸಿ
37 ಯಿರುತ್ತಂ ಯಿರಲು ಸಕವರುಸ ಸಾಸಿರದ ಮುನ್ನೂರ ಹದಿನಾಲ್ಕನೆಯ ಪ್ರಜಾಪತಿ ಸಂವತ್ಸರ
38 ದ ಕಾರ್ತಿಕ ಶುದ್ಧ ಪಂಚಮಿ ಆದಿತ್ಯವಾರ ಸನ್ಯಸನ ಸಮನ್ವಿತವಾಗಿ ಸ್ವರ್ಗಸ್ಥರಾದರು······ಮದವಳಿಗೆ
39 ರಾಮಕ್ಕನವರ ತಂದೆ ಮೊದಲುಗೊಂಡು······ಚರಿತ್ರದಿಂನೆಗಳೆ ವಿಕ್ರಮಸಂವತ್ಸರದ ಆಸಾಡ
40 ಸುಧ ಪಂಚಮಿ ಸುಕ್ರವಾರ ರೋಹಿಣೀ ನಕ್ಷತ್ರದಲು ತುಂಗಸಮಾಧಿ
41 ···· ····ಆಚಂದ್ರಾರ್ಕಮಾಗಿ
42 ·········ಮೂಡೆಧತ್ರವನೂ······ವೋಜಣ
43 ಸೆಟ್ಟಿ···········ರಾಮಕ್ಕ·········
44 ·········ನಿಷಧಿಯ ಕಲ್ಲಿಂಗೆ ಮಂಗಳಮಹಾ ಶ್ರೀ

## 110

### ಗೇರಸೊಪ್ಪೆಯ ನಗರಗೇರಿ ಬಸ್ತಿಯಬಳಿ ವರ್ಧಮಾನಬಸ್ತಿಯಬಳಿ ಮೂರನೆಯ ಶಾಸನ.

ಪ್ರಮಾಣ 3′-6″×2′-6″

1 ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘಲಾಂಛನಂ ಜೀಯಾ ತ್ರೈಳೋಕ್ಯನಾಥಸ್ಯ ಶಾಸನಂ ಜಿನಶಾಸನಂ ।
2 ಶ್ರೀಜಿನರಾಜರಾಜಿತ ಪದಾಂಬುಜ ರಾಜಮರಾಳನಗಿರಿಪುರಾಜಶಿರೋ
3 ಮಣಿ ಪ್ರಚುರಕೀರ್ತಿ ದಿಶಾವಳಯ ಪ್ರಕಾಶನು ತೇಜಭುಜ ಪ್ರತಾಪರಿಪುರಾಜಮುಖಾಂ
4 ಬುಜಹಸ್ತವೀರನುಂ ಭೂಜನವಂದ್ಯ ಹೊಂನನೃಪನರ್ಥಿಜನಾವನ ಕಲ್ಪವೃಕ್ಷನುಂ । ಹೊಂ
5 ನ ಮಹೀಶನಾತ್ಮಜಯು ಮಾಳಿಯಬರಸಿಗೆ ಕಾಮರಾಜಗಂ ಸಂನುತಮೂರ್ತಿ ಹೊಂನನೃಪನಾತ್ಮಸಬಾ
6 ಂಧವ ಮಂಗರಾಜನುಂ ಮನ್ಮಥರೂಪಹರಿ ಹರನೃಪಾಲಕನಾತನ ಪುತ್ರ ಹೈವಣರಸಂಗೆ ಮನಃಪ್ರಿಯಾಂ
7 ಗನೆಯು ಸಾಂತಲದೇವಿ ಸಮಾಧಿಕಾಲದೊಳು । ಆಕೆಯ ಗುರುಗಳು ಲೋಕಖ್ಯಾತಿಯ ನಾಂತಿರ್ದನಂ
8 ತವೀರ್ಯರು ರತಿಸಂಕಾಶ ಸೊಬಗೆನಿಸಿ ಸಂದಿರ್ದಾಕಾಂತೆಗೆ ಹೈವಣರಸ ವಲ್ಲಭನಾದಂ । ಸ್ಮರರೂಪಂ.
9 ಸೂದ್ರಕಂಗೀ ಪುರದೊಳು ಕೀರ್ತಿವೆತ್ತ ಬೊಮ್ಮಣಸೆಟ್ಟಿಯ ವರ ವನಿತ ಬೊಮ್ಮಕಂಗಂ ವರಸುಗು
10 ಣಿ ಸಾಂತಲರಸಿ ಪುಟ್ಟಿದಳಾಗಳ್ । ಅರಸಪ್ಪೊಡೆಯರ ತನೂಜೆ ವರಗುಣೆ ಬೊಮ್ಮಕನಾಕೆಯಾತ್ಮಜ ಸಾಂತಕರಸಿ
11 ಯು ಪರಮನ ಪದಮಂ ಸ್ಮರಿಯಿಸಿ ಸುರಲೋಕವೆಯ್ದಿ ಸುಖದಿಂದಿರ್ದಳು ಅರ್ಹನ್ತನ ಪಾದಾಂಬುಜಮಂ
12 ಸ್ಮರಿಯಿಸುತಂ ನಂಬಿ ಪದಮ ನಾಲಗೆಯೊಳಗುಚ್ಚರಿಸುತ್ತ ಸಾಂತಕರಸಿ ಶರೀರಮಂ ಪತ್ತೆಂಟುದಿನ
13 ದೊಳು ಸಂದಳು ವರವತ್ಸರ ತಾರಣದೊಳು ಸುರುಚಿರ ಫಾಲ್ಗುಣದ ಶುದ್ಧ ಪಾಡಿವತಿಥಿಯೊಳು ಹರಿದಶ್ವ
14 ದಿನದಿ ಸಾಂತಕರಸಿಯು ಸ್ವರ್ಗಸ್ಥೆಯಾದಳಾಕೆನಿಮಿತ್ತಂ (ಆಕೆನಿಮಿತ್ತಂ)ಮಾಡಸಿದ ನಿಷಿಧಿಯಕಲ್ಲಿಂಗೆ ಮಂಗಳ ಮಹಾಶ್ರೀ॥

## 111

### ಗೇರಸೊಪ್ಪೆಯ ನಗರಗೇರಿ ಬಸ್ತಿಯಬಳಿ ಜ್ವಾಲಾಮುಖಿ ದೇವಾಲಯದ ಮುಂದೆ ನಟ್ಟಿರುವ 1ನೆಯ ಕಲ್ಲು.

1 ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ ಜೀ
2 ಯಾ ತ್ರೈಳೋಕ್ಯನಾಥಸ್ಯ ಶಾಸನಂ ಜಿನಶಾಸನಂ
3 ನಗಿರಿಯಕುಲ ಚಕ್ರವರ್ತಿ········ರಾಜನಿರ್ಜಿತ······
4 ರಾಸಾಮನ್ತರವಳಿಯುಂ ಯಿಂತಾ ಹೊಂನಭೂಪನಳಿಯುಂ········ಆಸಾಮ
5 ನ್ತನಪುತ್ರನರ್ಥಿಕಾಮಂ ಕೋಮಳ······ಮರಸಂ······ಅರಿನೃಪಾಲನಾತನ······
6 ದೆ····ಧರ ಚಾರುಕೀರ್ತಿ ಪಂಡಿತ······ಸದ್ಗುರುಪ್ರಭು ಆಕಾಮನೃಪಾಲನಮಾವ
7 ಯೋಜ····ರಾಜ್ಯಮೆನಗಿರಿಯುಮನಿತುಂ ತನಗಾಗೆ ಭೈಚಣಭೂಪತಿಮ······
8 ನೆಗಳ್ದಂ ರಿಪುಸೈನ್ಯ······ನವರ···· ನಪದಸರಸಿ········ಜಿನಮುನಿಪಾದಾಂಬುಜಾತ······ನೃಪಾಲ
9 ಭೈಚಣಸೆಟ್ಟಿಪರಿಣತಾಂತಸ್ಕರಣಂ ಅಂತಿಪ್ಪ ಹೈವೆರಾಯನ ಪ್ರತಾಪವೆಂ
10 ತೆಂದೊಡೆ ಸ್ವಸ್ತಿಶ್ರೀಮನ್ಮಹಾ ಮಂಡಳೇಸ್ವರ······ನಿಯಮಿಾಸರಗಂಡ······ಪ್ರತಾಪ······
11 ಸೂಜೆಕಾಚಿಸಿವ ಸಿಂಹಾಸನ ಚಕ್ರವರ್ತಿ ನಿಳಿಂಪಪುರವರಾ
12 ಧೀಶ್ವರನೆನಿಪ ಭೈಚಿರಾಜಂ ರಾಜ್ಯಂಗಯಿವಲ ಷಕವರುಷ
13 ೧೩೩೩ನೆಯ ವಿಕ್ರಮಸಂವತ್ಸರ ಮಾಗ ಶು ೧ ಮಂದವಾರದ
14 ರಾತ್ರಿಯೊಳು ಹೈವೆರಾಜನ ಅಳಿಯ ಮಂಗರಾಜನು ಸ್ವರ್ಗಸ್ಥನಾದ ಶ್ರೀಜಿ
15 ನರಾಜರಾಜಿತ ಪದಾಂಬುಜಧ್ಯಂಗ······ಕೀರ್ತಿಯಿಂದೀ ಜಗದೊಳು
16 ··ವಲವೊಪ್ಪುವದಾನಿಯು ಹೈವೆಭೂಪನರಾಜಿಪ ಪಟ್ಟದಾನೆಯುಂ······
17 ······ಗೋವಿಜನರಹ ವಿಕ್ರಮಸಂ······ನಗಿರ ಮಂಗನೃಪಂ ಸುರಲೋಕ

18 ಕೆಯ್ದಿದಂ··ವಿಶುದ್ಧರಪ್ಪಮತ್ತ····ರಾಜಂ ಜಿನಮತಾಂಬುಧಿಹಿಮಕಿ
19 ರಣಂನಗಿರಪುರಾಧೀಶ ಮಂಗರಸಂಗಂ······ರಾಜಸಂನುತ
20 ····ರತಿಪಂಚಬಾಣನಸ—ಶ್ರೀ ಮಂಗಭೂಪಾಲಕಂ ಹಿಮರುಕ್
21 ··············ಶ್ರೀ·········ವಿಕ್ರಮಸಂವತ್ಸರದ······ಮಾಘಮಾಸದ········
22 ···············ಸುರಾಂಗನಾರಮಣ·:···········
23 ಜೀಯೆಂಬಿನಂ·····························
24 ············ಸಸಿಮಿತೇ। ಶ್ರೀವಿಕ್ರಮಾ···············
25 ಕಾಲ್ಯಸ್ಥೇದೇವಪ·:··················ಶುಭೇಪಕ್ಷೇವಳ
26 ಕ್ಷೇಮಂದವಾರ···························
27 ಸುರಪದಮಂ·····························

## 112

ಗೇರಸೊಪ್ಪೆ ನಗರಗೇರಿಬಳಿ ತಿರುಮಲೆ ದೇವರ ದೇವಾಲಯದ ನಿವೇಶನದಲ್ಲಿ ನಟ್ಟಕಲ್ಲು.

ಪ್ರಮಾಣ 7″ 6′ · 2″ 9′

1 ಶ್ರೀಗಣಾಧಿ ಪತಯೇನಮಃ ಸ್ವಸ್ತಿ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾ ರಂಭ ಮೂಲಸ್ತಂಥಾಯ ಶಂಭವೇ ಸ್ವಸ್ತಿ ಶ್ರೀ ಮನ್
2 ಮಹಾ ಮಂಡಲೇಶ್ವರರು ಸಾಳುವ ಚೆಂನ ಭೈರಾದೇವಿ ಅಮ್ಮನವರು ನಗರರಾಜ್ಯವ ನಾಳುವಲಿ ಹೈವೆ ತುಳು ಕೊಂ ಕಣ ಮುಂತಾದ ರಾಜ್ಯಂಗಳನು ಪ್ರತಿಪಾಳಿಸುತ್ತಂ ಇ
3 ದ್ದಂದಿನ ಶಾಲಿವಾಹನ ಶಕವರ್ಷ ೧೫೨೦ನೆಯ ಹೇಮಳಂಬಿ ಸಂವತ್ಸರದ ಮಾಘ ಬ ೫ ಲ್ಲೂ ಶ್ರೀಮತು ಕಾಶ್ಯಪ ಗೋತ್ರದ ಋಕ್ ಶಾಖೆಯ ಕರ್ಣಿ
4 ಕ ಮಲ್ಲರಸರ ಪೌತ್ರರು ಸಾಳುವ ಸೇನದೋವ ವಡುಗ ತಮ್ಮಪ್ಪ ಸೇನದೋವರು ಗೇರಸೊಪ್ಪೆಯಲ್ಲಿ ಕಟ್ಟಿಸಿದ ದೇವಸ್ಥಾನದಲಿ ಶ್ರೀ ತಿರುವೆಂಗಳನಾಥಸ್ವಾಮಿಯನು ಪ್ರತಿ
5 ಷ್ಠೆಯಮಾಡಿ ಆ ತಿರುವೆಂಗಳನಾಥಸ್ವಾಮಿಯ ಪಾದಮೂಲದಲಿ ಚೆನ್ನಭೈರಾದೇವಿ ಅಮ್ಮನವರ ಹೆಸರಲಿ ದೇವರ ಅಮೃತಪಡಿ ನಂದಾದೀಪ ಮುಂತಾದ ನಿತ್ಯನೈಮಿ
6 ತ್ತಿಕದ ಧರ್ಮವನು ಮನವಚನಕಾಯ ತ್ರಿಕರಣ ಸಿದ್ಧಿಯಿಂದ ಸಹಿರಣ್ಯೋದಕ ದಾನ ಧಾರಾಪೂರ್ವಕ ಶಾಸನಾಂ ಕಿತಮಾಡಿ ದೇವಸ್ವವಾಗಿ ಬಿಟ್ಟು ಬರಸಿದ ಧರ್ಮ
7 ದ ಮೂಲಸಾಧನ ಕ್ರಮ ವೆಂತೆಂದೆರೆ ನಮ್ಮ ತಂದೆ ನಾರಣಪ್ಪನವರು ನಾರಣನಾಯಕನ ಮಲ್ಲರಾಯ ನಾಯಕನ ಕಯ್ಯಲವೊಳಗೆ ಪ್ರಾ
8 ಕು ಪ್ರಮಾದಿ ಸಂವತ್ಸರದಮೇಲೆ ಅಡಹಡ ವೃತ್ತಿ ಶ್ರೀ ಅರಮನೆಯ ಅಧೀನವಾಗಿರಲು ನಾವು ಕಟ್ಟಿಸಿದ ದೇವಾಲ ದಲಿ ಅಮ್ಮನವರ
9 ಹೆಸರಲಿ ಧರ್ಮಕ್ಕೆ ಬಿಡಬೇಕಾದ ಕಾರಣ ಅಳಂಚಿಯೊಳಗೆ ಪ್ರಾಕ್ ಸಾಮಾನ್ಯವಾಗಿ ಉತ್ತಾರವೃತ್ತಿ ಅನಂತನ ಪಾಲು ಸಹವಾದ ಸ್ಥಳಂಗಳು
10 ಆ ಸ್ಥಳಂಗಳಿಂದ ಅರಮನೆಗೆ ತೆಱುವ ಬೆಳ್ಳಿಯ ಏಳೂವರೆ ಹೊನ್ನಿಂದ ತೆರಿಗೆ ಸಲುವಂತಾಗಿ ನಾವು ಅರಮನೆಗೆ ಕಾಣಿಕ್ಕೆ ಮಾಡಿ ಅಮ್ಮನವರ ಹೆಸರ
11 ಲ್ಲಿ ನಡೆವಂತೆ ಬಿಡುವರು ಈ ವೃತ್ತಿಗಳನು ತೆರುವ ಅರಸುಗಳು ಮಾನಮಾಡಿಕೊಂಡು ತಾವುಮುಂದಾಗಿ ಆಳುತಂ ಈ
12 ಸಾಧನ ಪ್ರಮಾಣಿನ ಚತುರ್ಗಡಿಯಿಂದೊಳಗೆ ಹೆವಸ ಗಡಿಯದ ಮಗದ ಹಳ್ಳಿಯನು ಇತ್ತು ಗದ್ದೆಯ ಸ್ಥಳಂಗಳನು ಹೊರಗಾಗಿ ಮೇಲಾದ ಸು
13 ದಿಯ ಬೀಜವರಿ ಮೂಡೆ ೨೫ ಕಣಿಲಗದ್ದೆ ಬೀಜವರಿ ಮೂಡೆ ೪ ಕಾಳೀಗದ್ದೆಯ ಬೀಜವರಿ ಮೂಡೆ ೩ ಅಂತು ಈ ಹೆಸರ ಗೊಂಡು ಬರೆದ ಸುಕಣಿಲೇಮಕ್ಕೆ ಸಹಾ ಬೀಜವರಿ
14 ಮೂವತ್ತು ಆರು ಮೂಡೆಗದ್ದೆಸ್ಥಳಂಗಳು ಆರಕ್ಕೆ ಬಂದ ತೆಂಗಿನ ಹಿತ್ತಲು ಸಹವಾದ ಈ ಸಮಸ್ತ ವೃತ್ತಿಯ
15 ಲವನು ನಾವುಕಟ್ಟಿಸಿದ ತಿರುಮಲ ದೇವಾಲ್ಯದಲಿ ಅಮ್ಮನವರ ಹೆಸರಿನಲಿ ನಡೆವ ನಿತ್ಯ ನೈಮಿತ್ತಿಕ ಮುಂತಾದ ಧರ್ಮಕ್ಕೆ ನಾವು ನಂಮ ತ್ರಿಕರಣ ಸುದ್ಧಿ
16 ಯಿಂದ ಸಹಿರಂಣ್ಯೋದಕ ದಾನಧಾರಾ ಪೂರ್ವಕ ಶಾಸನಾಂಕಿತ ಬೀಡು ದೇವಸ್ವವಾಗಿ ಬಿಟ್ಟು
17 ಕೊಟ್ಟೆವು ಈ ಸ್ಥಳಂಗಳಿಂದಲು ವರ್ಷ ೧ಕ್ಕೆ ಕಟ್ಟಿಃಹ ಧತ್ತ ನಾಡವೇಟೆ ಮೂಡೆ ೪೦೦ ನ
18 ಡಸುವ ಧರ್ಮದ ವಿವರ ಶ್ರೀ ತಿರುವೆಂಗಳಸ್ವಾಮಿಯ ಶ್ರೀ ಕಾರ್ಯವ ನಡಸುತಿಪ್ಪ ದೇವರಗ್ರಾಸಕ್ಕೆ ನಾಡವೇಟೆ ಮೂಡೆ ೪೦ ತಿರುವೆಂಗಳಸ್ವಾಮಿಯ
19 ಪಾದ ಮೂಲದಲ್ಲಿ ಉದಯಕಾಲದಲ್ಲಿ ನೈವೇದ್ಯಕ್ಕೆ ಪಾತಾಳೆ ಹೊಯ್ಯುಪಡಿಯಿಂದಲೂ ದಿನ ವೊಂದಕ್ಕೆ ಪೇಟೆಯ ಮೂಡೆ ೪ ಅಕ್ಕಿಯ ಲೆಕ್ಕದಲಿ ವರ್ಷ ೧ಕ್ಕೆ ಸಂಥಾ
20 ರ ವೇಳೆಯ ಮೂಡೆ ೧೨ಕ್ಕೆ ಪುಷ್ಪಮಾಲೆಯ ನಡಸುವ ಹೂಗಳಿಗೆ ಧತ್ತ ನಾಡವೇಟೆಯ ಮೂಡೆ ೪೦ ರಾತ್ರಿಯಕಾಲದಲ್ಲಿ ನಡೆವ ನೈವೇದ್ಯಕ್ಕೆ ಧಂಡಾರಿ ಹೊಯ್ಯು ಪಡಿಯಿಂದ
21 ಲೂ ದಿನ ವೊಂದಕ್ಕೆ ಪೇಠೆ ವೊಪ್ಪಿನ ಅಳಿ ಲೆಖ್ಖದಲು ವರ್ಷ ವೊಂದಕ್ಕೆ ಸಂಧ್ಯಾರಪೇಠೆಯ ಮೂಡೆ ೨೨ಕ್ಕೆ ದಾಳೋ ಜನು ಉಳಿಗವ ನಡಸುವ ಧಂಡಾರಿಗೆ ಧತ್ತ

